# ಶ್ರೀ ರಾಮಾನುಜ

ಯತಿಪತಿಯ ತಿರುವಡಿಗಳಲ್ಲಿ

ಅರ್ಪಣೆ

(ಪಾರ್ಥಿವ ಸಂವತ್ಸರದ ತಿರುನಕ್ಷತ್ರ)

ನಾರಾಯಣಪದಾಂಭೋಜಯುಗಲಪ್ರಾಪ್ತಿಸಾಧನೇ ।
ರಾಮಾನುಜಪದದ್ವಂದ್ವೇ ಇದಂ ಭೂಯಾತ್ಸಮರ್ಪಣಮ್ ॥

ಎಸ್. ವಿ. ಶ್ರೀನಿವಾಸರಾಘವಾಚಾರ್ಯ, ಎಂ. ಎ.
ಎಸ್. ಎಸ್. ರಾಘವಾಚಾರ್ಯ, ಎಂ. ಎ.
ಎಂ. ಎ. ಕೃಷ್ಣಸ್ವಾಮಿ, ಎಂ. ಎ.

ಪ್ರಕಾಶಕರು :

ಶ್ರೀ. ಹೆಚ್. ಎಸ್. ದೊರೆಸ್ವಾಮಿ,

ಮಿತ್ರ ಸಂಘ,

ಬೆಂಗಳೂರು

ಮೊದಲನೆಯ ಮುದ್ರಣ : ೧೯೪೫

ಬೆಲೆ.

ಉತ್ತಮ ಪ್ರತಿ : ಒಂದು ರೂಪಾಯಿ,

ಸಾದಾ ಪ್ರತಿ : ಹತ್ತಾಣೆ

ಮುದ್ರಕರು :

ಆರ್. ಎಸ್. ಹಬ್ಬು,

**ಉಷಾ ಪ್ರೆಸ್,** ನೀಲಗಿರಿ ರೋಡ್,

ಮೈಸೂರು

# ಮೊದಲ ಮಾತು

ಶ್ರೀಭಾಷ್ಯಕಾರರ ತಿರುನಕ್ಷತ್ರದವೇಳೆಗೆ ಯತಿರಾಜರಿಗೆ ಕಾಣಿಕೆಯೊಂದನ್ನು ಅರ್ಪಿಸಬೇಕೆಂಬ ಆಸೆ ಇದ್ದಿತು. ಕಾಣಿಕೆ ಮುಖ್ಯ; ಪುಸ್ತಕ ವ್ಯಾಜಮಾತ್ರ.

ಮೊದಲಾಗಿ ಸಿದ್ಧಾಂತದ ಪ್ರಾಚೀನತೆಯನ್ನು ತೋರಿಸುವ ಹಿನ್ನೆಲೆ, ಆಮೇಲೆ ರಾಮಾನುಜರ ಜೀವನ ಚರಿತ್ರೆಯ ಲಘುಪರಿಚಯ; ಅನಂತರ ಇತರ ದರ್ಶನಗಳ ಹಿನ್ನೆಲೆಯಲ್ಲಿ ರಾಮಾನುಜ ದರ್ಶನ ತೋರುವ ಬಗೆ; ಕೊನೆಯದಾಗಿ ವಿಶಿಷ್ಟಾದ್ವೈತ ಸಿದ್ಧಾಂತದ ನಿರೂಪಣೆ; ಹೀಗೆ ನಾಲ್ಕು ವಿಭಾಗಗಳು ಈ ಪುಸ್ತಕದಲ್ಲಿ ಕಾಣುವುವು

ರಾಮಾನುಜರ ವ್ಯಕ್ತಿತ್ವ ಮತ್ತು ಸಿದ್ಧಾಂತಗಳ ಬಗ್ಗೆ ಇಷ್ಟು ಚಿಕ್ಕ ಪರಿಮಾಣದಲ್ಲಿ ಬರೆಯತೊಡಗುವುದು ಬಹು ಕಷ್ಟ; ಅಲ್ಲದೆ, ಸಾಕಾದಷ್ಟು ತೃಪ್ತಿಕರವಾಗಿಯೂ ಕೆಲಸವಾಗದು. ಈ ವಿಷಯವನ್ನು ಈ ಪುಸ್ತಕ ಬರೆಯಲು ಕೆಲಸಮಾಡಿದವರು ಚನ್ನಾಗಿ ಬಲ್ಲರು. ಮುಂದೆ, ಅವಕಾಶವೊದಗಿದರೆ, ಈ ಕೊರತೆಯನ್ನು ಹೋಗಲಾಡಿಸುವ ಆಸೆ ಇದೆ.

ಈ ಕಾಣಿಕೆಯ ಅರ್ಪಣೆ ಸುಲಲಿತವಾಗಿ ನಡೆಯಲು ಅನುಕೂಲರಾಗಿ ದಯಮಾಡಿ ಪ್ರಕಾಶಕರಾದ ಶ್ರೀ ಹೆಚ್. ಎನ್. ದೊರೆಸ್ವಾಮಿಯವರು ಕೃತಜ್ಞತೆಗೆ ಪಾತ್ರರು. ಅಲ್ಲದೆ, ಕಾಲ ಕೊಂಚವಿದ್ದರೂ ಅಂದವಾಗಿ ಮುದ್ರಿಸಿ ಕೊಡುವ ಭರವಸೆ ಇತ್ತು ಕೊಟ್ಟ ಕಷ್ಟವೊಂದನ್ನೂ ಲಕ್ಷಿಸದೆ ನೆರವಿತ್ತ "ಉಷಾ" ಪ್ರೆಸ್‌ನವರಿಗೆ ವಂದನೆಗಳು ಸಲ್ಲುತ್ತವೆ.

**ಎಸ್. ವಿ. ಶ್ರೀನಿವಾಸರಾಘವಾಚಾರ್**
**ಎಸ್. ಎಸ್. ರಾಘವಾಚಾರ್**
**ಎಂ. ಎ. ಕೃಷ್ಣಸ್ವಾಮಿ.**

ತಾ|| ೧೮–೪–೪೫
ಪಾರ್ಥಿವ ಸಂ|| ದ ತಿರುನಕ್ಷತ್ರ

# ಪರಿವಿಡಿ

॥ ಶ್ರೀಃ ॥

# ಹಿನ್ನೆಲೆ

ಓಂ ತದ್ವಿಷ್ಣೋಃ ಪರಮಂ ಪದಂ
ಸದಾ ಪಶ್ಯನ್ತಿ ಸೂರಯಃ
ದಿವೀವ ಚಕ್ಷುರಾತತಮ್—

ಎಂದು ವೇದವಲ್ಲಿ ಸ್ತುತವಾಗಿರುವ ವಿಷ್ಣುವಿನ ಪರಮಪದವನ್ನು ಹೊಂದಬೇಕೆಂಬ ಪರಮೋದ್ದೇಶದಿಂದ ಜಗತ್ತಿನ, ಜೀವನ, ಜಗನ್ನಿಯಾಮಕನ ವಿಷಯವಾಗಿ ಸಂತತವಾದ ಅವಿಚ್ಛಿನ್ನವಾದ ವಿಚಾರ ನಡೆದಿದೆ; ಇಂದಿಗೂ ಇಲ್ಲೂ ಎಲ್ಲೆಲ್ಲೂ-ಎಲ್ಲೆಲ್ಲಿ ವಿಚಾರಮಾಡುವ, ವಿವೇಚಿಸುವ ಶಕ್ತಿಯುಳ್ಳ ಜನರಿರುವರೋ ಅಲ್ಲಿ ಎಲ್ಲೆಲ್ಲೂ—ನಡೆಯುತ್ತಲೇ ಇದೆ. ಮನುಷ್ಯನಿಗೆ ತಾನು ತನ್ನ ಸುತ್ತಲಿರುವುದು ಎಂಬ ಎರಡು ವಿಭಾಗ ಮೊದಲು ಕಂಡುಬಂದು ಅಲ್ಲಿಂದ ಮುಂದೆ ವಿಚಾರ ಉಪಕ್ರಮವಾಗುತ್ತದೆ. ಹೀಗೆ ವಿಚಾರ ಮಾಡುವುದು ಬುದ್ಧಿ ಎಂಬ ಶಕ್ತಿಯುಳ್ಳ, ಎಲ್ಲ ಜನರ ಸಹಜಗುಣ. ಅಷ್ಟೇ ಅಲ್ಲದೆ, ದಿನದಿನದ ಜೀವನ ನಡೆಯುತ್ತಿರುವಂತೆಯೇ ಹಲವಾರು ಪ್ರಶ್ನೆಗಳು ಎದ್ದು ಬರುತ್ತವೆ. ಆಹಾರ ವಸತಿ ನಿದ್ದೆ ದಾಂಪತ್ಯಗಳಿಗೆ ಮಾತ್ರವೇ ಪ್ರಶ್ನೆಗಳು ಸಂಬಂಧಿಸಲಾರವು; ಇವೆಲ್ಲವನ್ನೂ ದಾಟಿ "ಇಲ್ಲಿ—ಈ ಜಗತ್ತಿಗೆ—ತಾನು ಬಂದುದೆಲ್ಲಿಂದ, ಏತಕ್ಕೆ, ಮುಂದೆ ಹೋಗುವುದೆಲ್ಲಿಗೆ, ಹೇಗೆ" ಮುಂತಾಗಿ ಮೇಲಿಂದಮೇಲೆ ಪ್ರಶ್ನೆಗಳು ಬರುವುವು. ಜೀವನದ ಗುರಿಯೊಂದರ ಬಗ್ಗೆ ಸಾವಿರಾರು ಬಾರಿ ವಿಚಾರ ನಡೆಯುವುದು. ಈ ಪ್ರಶ್ನೆಗಳಿಗೆ ಸಮಾಧಾನವನ್ನು ಹುಡುಕುವ ಪ್ರಯತ್ನವೇ ವಿಚಾರ; ಸಮಾಧಾನವನ್ನು ಕಾಣುವುದೇ ದರ್ಶನ; ಕಂಡು ತನ್ನದನ್ನಾಗಿ ಮಾಡಿಕೊಳ್ಳುವದೇ ಅನುಭವ—ಸಾಕ್ಷಾತ್ಕಾರ. ಈ ವಿಚಾರ ದರ್ಶನ ಸಾಕ್ಷಾತ್ಕಾರಗಳು ಜಗತ್ತು ಹುಟ್ಟಿದಂದಿನಿಂದ ನಡೆದುಬಂದಿವೆ. ಆದುದರಿಂದಲೇ ವಿಚಾರದ ಬಗ್ಗೆ ವೈವಿಧ್ಯ, ದರ್ಶನಗಳ ಬಗ್ಗೆ ಅನೇಕತ್ವ, ಹೀಗಿದ್ದೂ ಸಾಕ್ಷಾತ್ಕಾರದ ಬಗ್ಗೆ ವಸ್ತುತಃ ಏಕತೆ. ಒಂದೇ ಗುರಿ, ದಾರಿ ಹಲವು. ಈ ಹಲವು ದಾರಿಗಳಲ್ಲಿ ಅತಿ ಸುಗಮವೂ ಸುಂದರವೂ ಆದ ದಾರಿಯೊಂದನ್ನು ಜಗತ್ತಿನ ಜೀವರಾಶಿಯ ಉದ್ಧಾರಕ್ಕೆಂದು ತೋರಿಸಿ

ಕೊಟ್ಟ ಮಹನೀಯರು ಶ್ರೀ ರಾಮಾನುಜಾಚಾರ್ಯರು. ಇವರಾದರೂ ಎಲ್ಲೋ ಆಕಾಶದಲ್ಲಿಂದು ದಾರಿಯನ್ನು ಮಾಡಿಕೊಡುವುದರ ಬದಲು ಅಂದಿನವರೆಗೆ ಜನರು ನಡೆದು ಸವೆದ ನಾಲ್ಕಾರು ಜಾಡುಗಳನ್ನೂ ಕಾಲು ಹಾದಿಗಳನ್ನೂ ಒಟ್ಟುಗೂಡಿಸಿ, ಅತ್ತ ಇತ್ತ ಮಧ್ಯೆ ಬೆಳೆದಿದ್ದ ಗಿಡಗಂಟಿ ಪೊದರುಗಳನ್ನು ತೆಗೆದುಹಾಕಿ "ಇದೋ ನಿಮಗೊಂದು ರಾಜಮಾರ್ಗ" ಎಂದು ಸಾರಿದರು. ಹಲಕೆಲವು ದಾರಿಗಳು ಕೆಲಕಾಲ ಕಣ್ಣಿಗೆ ಕಾಣದವಾಗಿದ್ದವನ್ನೂ ಹೊಸದಾಗಿ ತೋರಿಸಿಕೊಟ್ಟರು. "ಜೀವನದ ಅರ್ಥವಿದು, ರೀತಿಯಿದು, ಹೀಗೆ ನಡೆದು ಹಲವು ಜನ ಹಿರಿಯರಾದರು, ಇಲ್ಲಿ ನಡೆಯಬೇಕಾದರೆ ಹಕ್ಕಿನ ಹಂಗಿಲ್ಲ" ಎಂದು ಮುಂತಾಗಿ ಅಭಯವಿತ್ತು ಕಾಪಾಡಿದರು. ಇವರು ತೋರಿದ ರಾಜಮಾರ್ಗವೆಂದರೆ ವಿಶಿಷ್ಟಾದ್ವೈತಸಿದ್ಧಾಂತ. ಈ ಸಿದ್ಧಾಂತದ ಹಿನ್ನೆಲೆಯಾಗಿ, ಭರತಖಂಡದಲ್ಲಿ ಅನಾದಿ ಕಾಲದಿಂದ ನಡೆದ ವಿಚಾರ ಸರಣಿಯನ್ನು ಕೊಂಚ ನೋಡುವುದು ಅಗತ್ಯವೆನ್ನಿಸುತ್ತದೆ.

ಮಂತ್ರಗಳನ್ನು ಕಂಡ (ಮಂತ್ರದ್ರಷ್ಟೃಗಳಾದ) ಋಷಿಗಳು ಹಾಡಿದುದು "ವೇದ." ವೇದದಲ್ಲಿ ಮನುಷ್ಯನಿಗಿಂತ ಶಕ್ತಿಯಲ್ಲಿ ಬುದ್ಧಿಯಲ್ಲಿ ಎಲ್ಲದರಲ್ಲೂ ಮೀರಿದ "ದೇವತೆ"ಗಳ ಸ್ತುತಿ ಕಂಡುಬರುತ್ತದೆ. ಲೌಕಿಕಾನುಭವದಲ್ಲಿ ಸ್ತುತಿಯಿಂದ ಅನುಗ್ರಹ ಅನುಕೂಲಗಳು ಹೇಗೆ ಸಿದ್ಧಿಸುವುವೋ, ಹಾಗೆಯೇ ಈ ದೇವತೆಗಳ ಪ್ರಸಾದಕ್ಕಾಗಿ ಸ್ತುತಿ ಬೇಕು, ಕೋಪದ ಉಪಶಮಕ್ಕಾಗಿ ಸ್ತುತಿ ಬೇಕು. ಸ್ತುತಿಯಿಂದಲೇ ಅನುಗ್ರಹ ಬರಲಾರದುದರಿಂದ, ಪೂಜೆ ಬೇಕಾಯಿತು. ಪೂಜೆ ಯಾಗವಾಯಿತು. ದೇವತೆಯನ್ನು ಬೇಡಬಯಸಿದವನು ಯಾಗಮಾಡಬೇಕಾಯಿತು. ಹಲವಾರು ದೇವತೆಗಳೆಂಬ ಭಾವದಿಂದ, ಈ ಹಲವಾರು ದೇವತೆಗಳು ಒಬ್ಬ ದೇವನ–ದೇವಾಧಿದೇವನ ಆಜ್ಞೆಯನ್ನು ಹೊತ್ತು ನಡೆಯುತ್ತಿರುವರೆಂಬ ಭಾವನೆಯೂ ವೇದದಲ್ಲೇ ಕಾಣುತ್ತದೆ. ದೇವತೆಗಳೂ ಸಹ 'ಋತ'ವನ್ನು–ಧರ್ಮವನ್ನು, ನಿಯಮವನ್ನು–ಬಿಡದೆ ಅನುಸರಿಸಲೇ ಬೇಕು. ಋತದ ಒಡೆಯ 'ವರುಣ'–ಹಲವು ಬಾರಿ 'ವಿಷ್ಣು'. ಅಂತೂ ಏಕದೇವತ್ವ ಭಾವನೆ ಮೊದಲಾದುದೇ ತಡ, ಯಾಗದ ರೀತಿ ಮಾರ್ಪಟ್ಟು ಪೂಜೆಯ ರೀತಿ, ಸ್ತುತಿಯ ರೀತಿ, ಬೇಡಿಕೆಯ ರೀತಿ ಇವೆಲ್ಲದರಲ್ಲೂ ಮಾರ್ಪಾಡುಗಳು ಬರತೊಡಗಿದವು. ಒಂದೆಡೆ ಧಾನ್ಯದ ಸಮೃದ್ಧಿಯನ್ನು ಬೇಡಿದ್ದರೆ,

ಇನ್ನೊಂದೆಡೆ ಹತ್ತಾರು ವೀರಸುತರನ್ನು ಬಯಸಿದವರು, ಈಗ ದೇವದೇವನನ್ನು ಬೇಡುವುದು ಎಂದೆಂದಿಗೂ ಅಳಿಯದ ಆನಂದವನ್ನು. ಆ ಆನಂದದ ಸ್ಥಾನವಾದ ಪರಮಪದವನ್ನು ಸದಾ ದೃಷ್ಟಿಪಥದಲ್ಲಿಟ್ಟುಕೊಂಡಿರುವವರು ಸೂರಿಗಳು. ಈ ಮಾತನ್ನೇ ಮೊಟ್ಟಮೊದಲಲ್ಲಿ ವೇದದ ಭಾಷೆಯಲ್ಲಿ ಹೇಳಿದೆ.

"ವೇದಾಂತ"ವೆಂದು ಹೆಸರು ಹೊಂದಿದ ಉಪನಿಷತ್ತುಗಳಲ್ಲಿ ವಿಚಾರವೇ ಪ್ರಧಾನವಾಗಿ ಸ್ತುತಿಪ್ರಾರ್ಥನೆಗಳು ಕಡಮೆಯಾದುವು. ಮೇಲಿಂದ ಮೇಲೆ ಇಲ್ಲಿ ಕಾಣುವ ಪ್ರಶ್ನೆ, "ಯಾವುದೊಂದನ್ನು ತಿಳಿದರೆ ಎಲ್ಲವನ್ನೂ ತಿಳಿಯಬಹುದೋ, ಯಾವುದೊಂದನ್ನು ಗಳಿಸಿದರೆ ಎಲ್ಲವೂ ಗಳಿಸಿದಂತಾಗುವುದೋ ಅದು ಯಾವುದು ?" ಎಂಬುದೇ. ಉಪನಿಷತ್ತುಗಳ ವಿಚಾರದಿಂದ ಉಂಟಾದ ಅನುಭವವನ್ನು ಸ್ಥೂಲವಾಗಿ ನೋಡಿದರೆ, ಪರಸ್ಪರ ವಿರೋಧ ಕಂಡುಬರುತ್ತದೆ. ಪ್ರಪಂಚದ ಸತ್ಯತೆ ಒಂದೆಡೆ ಪ್ರತಿಪಾದಿತವಾಗಿದ್ದರೆ ಇನ್ನೊಂದೆಡೆ ಮಿಥ್ಯಾತ್ವ ಕಂಡೀತು; ಒಂದೆಡೆ ಆತ್ಮಪರಮಾತ್ಮರ ಬಗ್ಗೆ ಭೇದ ಹೇಳಿದ್ದರೆ, ಬೇರೆಡೆ ಅಭೇದ ಹೇಳಿರುವುದು ಕಾಣುತ್ತದೆ. ಆದರೆ, ಸೂಕ್ಷ್ಮವಾಗಿ ಸಮಗ್ರವಾದ ಸಮನ್ವಯ ದೃಷ್ಟಿಯಿಂದ ಹೊರಟರೆ ಎಲ್ಲವನ್ನೂ ಪರಸ್ಪರ ವಿರೋಧವಿಲ್ಲದಂತೆ ಒಂದು ತತ್ತ್ವಸರಣಿಗೆ ಅನ್ವಯಿಸಬಹುದು. ಬಹು ಹಿಂದಿನ ಛಾಂದೋಗ್ಯ, ಬೃಹದಾರಣ್ಯಕ ಉಪನಿಷತ್ತುಗಳಲ್ಲಿ ಶ್ರೀಮನ್ನಾರಾಯಣ ಜಗತ್ತುಜೀವಗಳೊಳಗೆ ಅಂತರ್ಯಾಮಿಯಾಗಿದ್ದಾನೆಂಬ ಮಾತು ಕಾಣುತ್ತದೆ. "ವ್ಯಾಪನಶೀಲ" ಎಂಬ ಅರ್ಥವುಳ್ಳ "ವಿಷ್ಣು" ವೇದದ ಕರ್ಮಕಾಂಡದಲ್ಲಿ–ಎಂದರೆ ಸಂಹಿತೆ ಬ್ರಾಹ್ಮಣಗಳಲ್ಲಿ–ಸ್ತುತನಾಗಿ ಯಾಗವನ್ನು ಕೈಕೊಂಡು, ಉಪನಿಷತ್ತಿನಲ್ಲಿ ಜಗಜ್ಜೀವರಿಗೆ ಆಧಾರನಾಗಿ, ಅಂತರ್ಯಾಮಿಯಾಗಿ ಇರುತ್ತ "ಪರಮಾತ್ಮ" "ಬ್ರಹ್ಮ" ಪದವಾಚ್ಯನಾಗಿರುವುದು ಕಾಣುತ್ತದೆ. ಸದಸದ್ವಿವೇಕದಿಂದ ನಿಯತವಾದ ಧರ್ಮ ಮಾರ್ಗದಲ್ಲಿ ನಡೆದು ಸದಾ ಶ್ರೀಮನ್ನಾರಾಯಣನನ್ನು ಆರಾಧಿಸುವುದೇ ಪರಮಪುರುಷಾರ್ಥವಾದ ಮುಕ್ತಿಗೆ ಸಾಧನ ಎಂಬುದು ಉಪನಿಷತ್ತುಗಳಲ್ಲೇ ಪ್ರತಿಪಾದಿತವಾಗಿದೆ.

ವೇದವೇದಾಂತಗಳ ಸಾರವನ್ನು ಸಾಮಾನ್ಯಜನರೆಲ್ಲರಿಗೂ ದೊರಕಿಸಿಕೊಡಬೇಕೆಂಬ ಹಿರಿಯ ಆಸೆಯಿಂದ ಮಹರ್ಷಿಗಳಾದ ವಾಲ್ಮೀಕಿ ಮತ್ತು ವ್ಯಾಸರು, ರಾಮಾಯಣ ಮತ್ತು ಮಹಾಭಾರತ ಎಂಬ ಇತಿಹಾಸಗಳನ್ನು

ರಚಿಸಿದರು. ಹೀಗೆಯೇ ಭಾಗವತವೂ ಉಳಿದೆಲ್ಲ ಪುರಾಣಗಳೂ ರಚಿತ ವಾದುವು. ಹಿರಿದಾದ ತತ್ವವು ಎಲ್ಲರ ಬುದ್ಧಿಗೂ ನಿಲುಕುವಂತೆ ಆಗಿ ಧರ್ಮ ಉಳಿಯಬೇಕೆಂಬ ಉದ್ದೇಶವೇ ಇವೆಲ್ಲವುಗಳ ರಚನೆಗೆ ಕಾರಣ. ತರ್ಕಕ್ಕೂ ಶಾಸ್ತ್ರವಾದಕ್ಕೂ ನಿಲುಕದಿರುವ ತತ್ವವನ್ನು ಸಾಮಾನ್ಯ ಜನರ ಮಟ್ಟಕ್ಕೆ ತಂದುಕೊಟ್ಟು ಅನುಭವಕ್ಕೆ ಅವಕಾಶ ಕಲ್ಪಿಸಿದುವು ಇತಿಹಾಸ ಪುರಾಣಗಳು. ಪ್ರಭುಸಮ್ಮಿತವಾದ ವೇದದಿಂದ ಸುಹೃತ್ಸಮ್ಮಿತಗಳಾದ ಪುರಾಣೇತಿಹಾಸಗಳು ಬೇರೆಯಾಗಿ ಕಂಡು ಬಂದರೂ ವಸ್ತುತಃ ಒಂದೇ ಗುರಿ ಯಲ್ಲಿ ನಿಲ್ಲುವುವೆಂಬುದು ಸೂಕ್ಷ್ಮವಾಗಿ ನೋಡುವವರಿಗೆ ಕಾಣದಿರದು. ಜನತೆ ಯಲ್ಲಿ ಹಿರಿಯ ಗುಣವನ್ನು ಹಿರಿಯ ಜೀವನವನ್ನು ಬೆಳಗಿ ತೋರಿಸಬೇಕೆಂದು ಜನರ ಮಧ್ಯೆ ಅವತಾರಮಾಡಿದ ಪರಮಪುರುಷನ ಕಾರ್ಯಕಲಾಪವೇ ಈ ಗ್ರಂಥಗಳಲ್ಲಿ ಕಾಣಬಹುದಾದುದು. ವಿಷ್ಣು ತನ್ನ ಭಕ್ತರಿಗಾಗಿ ಹತ್ತು–ಹತ್ತೇ ಏಕೆ, ಲೆಕ್ಕವಿಲ್ಲದಷ್ಟು–ಅವತಾರಗಳನ್ನೆತ್ತಿ ಬರುವನೆಂಬ ಮಾತು ಬುದ್ಧಿಗಮ್ಯ ವಾಗದಿದ್ದರೂ, ಭಕ್ತಿಯಿಂದ ತುಂಬಿದ ಹೃದಯದಲ್ಲಿ ನಿರತಿಶಯವಾದ ವಿಶ್ವಾಸವನ್ನುಂಟುಮಾಡಿಯೇ ಮಾಡುತ್ತದೆ. ಆದುದರಿಂದಲೇ ಎಲ್ಲ ಧರ್ಮ ಗಳಲ್ಲೂ ದೇವರ ಅವತಾರವೋ ದೇವದೂತರ ಆಗಮನವೋ ಹಲವಾರುಬಾರಿ ಕಂಡು ಬರುತ್ತದೆ. ಅಂತಹ ಅವತಾರಗಳಲ್ಲಿ ಶ್ರೀರಾಮಾವತಾರ ಹಲವು ಕಾರಣಗಳಿಂದ ಅತಿ ಮುಖ್ಯವೆನ್ನಿಸುತ್ತದೆ. ಈ ರಾಮಾವತಾರದಲ್ಲಿ ಭಗ ವಂತನು ಆಶ್ರಿತರಕ್ಷಕನೆಂದೂ ಧರ್ಮಸಂರಕ್ಷಕನೆಂದೂ ತೋರಿಸಿದ ಲೀಲೆಯೇ ರಾಮಾಯಣದ ಕಥಾವಸ್ತು. ಆದುದರಿಂದಲೇ ರಾಮಾಯಣ ಲೋಕಪೂಜ್ಯ. ಹಾಗೆಯೇ ಮಹಾಭಾರತವೂ ಸಹ. ಕೌರವ ಪಾಂಡವರೇ ಪ್ರತೀಕಗಳಾಗಿ ರುವ ಅಧರ್ಮ–ಧರ್ಮಗಳ ಹೋರಾಟದಲ್ಲಿ, ಧರ್ಮದ ಜಯಕ್ಕೆಂದು ಭಗ ವಂತನು ಕಲ್ಪಿಸುವ ಸನ್ನಿವೇಶಗಳು, ಮೇಲಿಂದ ಮೇಲೆ ಬರುವ ಉಪದೇಶದ ಮಾತುಗಳು ಯಾರ ಮನಸ್ಸನ್ನೂ ಆಕರ್ಷಿಸದಿರಲಾರವು; ಯಾರೊಬ್ಬರ ಜೀವನವನ್ನೂ ಉನ್ನತಿಗೊಳಿಸದಿರಲಾರವು. ಭಾಗವತ ಹರಿವಂಶ ವಿಷ್ಣು ಪುರಾಣ ಮುಂತಾದುವು ಭಗವಂತನು ಬೇರೆಬೇರೆ ಅವತಾರಗಳನ್ನೆತ್ತಿ ಜಗತ್ತಿನ ಕಲ್ಯಾಣಕ್ಕಾಗಿ ಮಾಡಿದ ಹಿರಿಯ ಕಾರ್ಯಗಳನ್ನು ಹೊಗಳಿ ಹಾಡುವುದಕ್ಕೇ ರಚಿತವಾಗಿವೆ ಎಂದು ಹೇಳಿದೆ.

ಮಹಾಭಾರತದಲ್ಲಿ ಅಂತರ್ಗತವಾಗಿರುವ " ಭಗವದ್ಗೀತೆ "ಯ ಬಗ್ಗೆ ಎರಡು ಮಾತನ್ನಾಡಬೇಕಾಗಿದೆ. ವೇದವೇದಾಂತಗಳಂತೆಯೇ ಪ್ರಮಾಣ ಗೀತೆ. ಈ ಬಗ್ಗೆ ಆಸ್ತಿಕರೆಲ್ಲರ ಒಪ್ಪಿಗೆ ಇದೆ. ಗೀತೆ ಸಾಕ್ಷಾತ್ತಾಗಿ ಭಗವಂತನು ಅರ್ಜುನನಿಗೆ ಕೊಟ್ಟ ಉಪದೇಶ. ಇಲ್ಲಿ ಕಾಣುವುದಾದರೂ ಕರ್ಮಮಾಡಲು ಪ್ರಚೋದನೆ ; ಕರ್ಮ ಕಾಮ್ಯವಾಗಿರದೆ ನಿಷ್ಕಾಮವಾಗಿರಬೇಕು, ಅಂದರೆ ಭಗವತ್ಕೈಂಕರ್ಯರೂಪವಾಗಿದ್ದು ಆತನಿಗೆ ಅರ್ಪಿತವಾಗಿದ್ದರೆ ಕರ್ಮ ಮಾಡಿದವನಿಗೆ ಕರ್ತೃತೆಯಿಲ್ಲದಿರುವುದು ಎಂದು. ಎರಡನೆಯದಾಗಿ, ಜ್ಞಾನ ಗಳಿಸಬೇಕೆಂದು ಪ್ರಚೋದನೆ ; ಜ್ಞಾನವೆಂದರೆ ಲೌಕಿಕವಾದ ವ್ಯವಹಾರದಲ್ಲಿ ನಿತ್ಯವೆಂದೂ ಮುಖ್ಯವೆಂದೂ ಪರಿಗಣಿತವಾಗಿರುವ ಶರೀರ ಶಾರೀರಕ ವಿಷಯಗಳ ಅನಿತ್ಯತೆಯನ್ನೂ ದುಃಖ ಮೂಲತೆಯನ್ನೂ ಗೌಣತೆಯನ್ನೂ ಕಂಡು, ಇವುಗಳಿಂದ ಭಿನ್ನನಾದ ಆತ್ಮನ ಮತ್ತು ಅಲ್ಲಿಂದಲೂ ಭಿನ್ನನಾಗಿಯೂ ಅಭಿನ್ನನಾದ ಪರಮಾತ್ಮನ ನಿತ್ಯತೆ ಸುಖ ಸಂಪತ್ತು ಮುಖ್ಯತೆಗಳನ್ನು ತಿಳಿಯುವುದು. ಮೂರನೆಯದಾಗಿ ನಿತ್ಯವೂ ನಿರತಿಶಯವೂ ನಿರವಧಿಕವೂ ಆದ ಮುಕ್ತಿಯನ್ನು ಗಳಿಸಲು ಸಾಧನವೆಂಬ ಭಕ್ತಿಗಾಗಿ ಪ್ರಚೋದನೆ. ಶ್ರೀಕೃಷ್ಣ ಲೀಲಾಮಾನುಷವಿಗ್ರಹನಾಗಿ ಪಾರ್ಥಸಾರಥಿಯಾಗಿ ಪಾರ್ಥನೆಂಬ ನಿಮಿತ್ತದಿಂದ ಲೋಕದ ಉಪದೇಶಕ್ಕಾಗಿ ತೋರಿಸಿಕೊಟ್ಟ ಮಹಾ ರಾಜಮಾರ್ಗ ಭಗವದ್ಗೀತೆಯದು ; ಒಂದು ಇನ್ನೊಂದಕ್ಕೆ ತಾನಾಗಿಯೇ ಕರೆದೊಯ್ಯುವಂತಿವೆ ಕರ್ಮಜ್ಞಾನಭಕ್ತಿಗಳು ; ಇವುಗಳೆಲ್ಲರಿಂದ ಪ್ರಪತ್ತಿ, ಶರಣಾಗತಿ, ಆದರ ಪರಮಪ್ರಯೋಜನ ಮುಕ್ತಿ.

ಭಗವಂತನಲ್ಲಿ ಭಕ್ತಿಯಿರಬೇಕೆಂಬ ಭಾವ ಮೊದಲಾದಂದೇ ಪೂಜೆಯ ಕ್ರಮವೂ ನಿರ್ದಿಷ್ಟವಾಗಲಾರಂಭಿಸಿತು. ಪೂಜೆ ಮಾಡುವ ರೀತಿಯನ್ನು ಬೋಧಿಸುವ ಗ್ರಂಥಗಳಿಗೆ ' ಆಗಮ ' ಎಂಬ ಹೆಸರಿದೆ. ಇವುಗಳಲ್ಲಿ ಬಹು ಪವಿತ್ರವಾದ " ಪಾಂಚರಾತ್ರಾಗಮ "ವನ್ನು ಸಾಕ್ಷಾತ್ ಭಗವಂತನು ಉಪದೇಶಿಸಿದನೆಂದು ಆಸ್ತಿಕರ ನಂಬಿಕೆ. ಮಿಕ್ಕ ಹಲವಾರು ಆಗಮಗಳಲ್ಲಿ ರಜಸ್ತಮೋಗುಣ ಪ್ರಧಾನವಾದ ಹಲಕೆಲವು ವಿಧಾನಗಳು ವಿಹಿತವಾಗಿರುವುದು ಕಂಡುಬರುತ್ತವೆ. ಆದರೆ, ಪಾಂಚರಾತ್ರಾಗಮದ ವಿಧಾನ ಕೇವಲ ಸೌಮ್ಯ, ಸತ್ತ್ವಪ್ರಧಾನ. ಮೇಲೆ ಮೇಲೆ ವಿರಬಯಸುವವನ ಮನಸ್ಸಿಗೂ ಆತ್ಮಕ್ಕೂ ಸತ್ತ್ವ

ಗುಣವನ್ನು ಹೆಚ್ಚು ಹೆಚ್ಚಾಗಿ ಸೇರಿಸುವುದೇ ಇದರ ವೈಶಿಷ್ಟ್ಯ. ಇಲ್ಲಿ ಸಮಾಜ ದಲ್ಲಿ ವಾಸಿಸುವ ಮನುಷ್ಯರು ತಮ್ಮ ಧರ್ಮವನ್ನು ಬಲಗೊಳಿಸಿಕೊಳ್ಳ ಬೇಕೆಂಬ ಪ್ರಯತ್ನಕ್ಕೆ ಎಷ್ಟು ಅನುಕೂಲಬೇಕೋ ಅಷ್ಟೂ ದೊರೆಯುವುದು. ವಿಗ್ರಹಾರಾಧನೆಯ ಬಗ್ಗೆ ಇಂದು ಹಲವಾರು ಕಾರಣಗಳಿಂದ ಅಭಿಪ್ರಾಯ ಭೇದಗಳು ಹುಟ್ಟಿರುವುವಾದರೂ, ಮನುಷ್ಯನು ಈ ಲೋಕದಲ್ಲಿರುವವರೆಗೆ ಯಾವುದೇ ಒಂದು ಪ್ರತೀಕವಿಲ್ಲದೆ ತನ್ನ ಗುರಿಯನ್ನು ಸಾಧಿಸುವುದು ಸಾಧ್ಯ ವಾಗದಾದುದರಿಂದ ವಿಗ್ರಹಗಳು ಅವಶ್ಯಕ; ವಿಗ್ರಹದ ನಿರ್ಮಾಣದಲ್ಲೂ ಮನುಷ್ಯನಲ್ಲಿ ಸಹಜವಾಗಿರುವ ಸೌಂದರ್ಯಾನುಭವೇಚ್ಛೆಯ (aesthetic need) ಕಡೆಗೂ ಪೂರ್ಣವಾದ ಗಮನ ಕೊಡಬೇಕಾದುದು ಬಹು ಅಗತ್ಯ. ಆದುದರಿಂದಲೇ, ಪಾಂಚರಾತ್ರಾಗಮದಲ್ಲಿ ಭಗವಂತನು ನಮ್ಮೆಲ್ಲರ ಕಲ್ಪನೆಗೂ ಅತೀತವಾದ ಸ್ವರೂಪವನ್ನು ಹೊಂದಿದ್ದರೂ, ನಮ್ಮ ನಮ್ಮ ಶಕ್ತಿವಾಸನೆ ಕರ್ಮಗಳಿಗನುಗುಣವಾಗಿ ನಮಗೆ ಸುಲಭವಾಗಿರುವನೆಂಬ ತತ್ತ್ವವನ್ನು ತೋರಿಸಿಕೊಡಬೇಕೆಂದೇ, ವಿಗ್ರಹ ಮತ್ತು ಪೂಜೆಯ ವಿಧಾನ ಉಪದಿಷ್ಟ ವಾಗಿದೆ.

ಉಪನಿಷತ್ತಿನಲ್ಲಿ ತತ್ತ್ವವನ್ನು ಕುರಿತು ವಿಚಾರ ಮಾಡುವ ವೇಳೆಯಲ್ಲಿ ದೊರೆತ ಫಲವು ಕಂಡುಬರುತ್ತದೆಯೇ ವಿನಾ, ವಿಚಾರ ಹೆಜ್ಜೆಹೆಜ್ಜೆಯಾಗಿ ನಡೆದು ಬಂದ ಸರಣಿ ಸಿಗದು. ಇದೇ ಫಲ—ಎಂದರೆ ಪರಮಪುರುಷಾರ್ಥ ಮತ್ತು ಅದಕ್ಕೆ ಸಾಧನ—ವನ್ನು ಮನಸ್ಸಿನಲ್ಲಿಟ್ಟುಕೊಂಡು ಅವುಗಳ ಬಗ್ಗೆ ಯುಕ್ತಿಯಿಂದಲೂ ಸಂಶಯ ನಿರಾಸದಿಂದಲೂ ನಡೆಯಬೇಕಾದ ಸ್ಥಿರೀಕರಣ ಕ್ಕೆಂದು ಸೂತ್ರ ಗ್ರಂಥಗಳು ಸೃಷ್ಟವಾದುವು. ಭರತಖಂಡದಲ್ಲಿ ಪ್ರಚಲಿತ ವಾಗಿರುವ ದರ್ಶನಗಳೆಲ್ಲವೂ—ಚಾರ್ವಾಕ ದರ್ಶನವೂ ಸಹ—ಒಂದು ಸೂತ್ರ ಗ್ರಂಥವನ್ನು ಅವಲಂಬಿಸಿಯೇ ಬೆಳೆದು ಬಂದಿವೆ. ಉಪನಿಷತ್ತುಗಳಲ್ಲಿ ಪ್ರತಿ ಪಾದಿತವಾಗಿರುವ ಆತ್ಮ ಬ್ರಹ್ಮಗಳ ಬಗ್ಗೆ ಇರುವ ಸೂತ್ರ ಗ್ರಂಥ ಬಾದರಾಯ ಣರ "ಬ್ರಹ್ಮಸೂತ್ರ." ಇದಕ್ಕೆ ಶಂಕರ, ರಾಮಾನುಜ, ಮಧ್ವ, ವಲ್ಲಭ, ನಿಂಬಾರ್ಕ, ಯಾದವ, ಭಾಸ್ಕರ, ಶ್ರೀಕಂಠ ಮುಂತಾದ ಹಲವು ಜನ ಮಹ ನೀಯರು ವ್ಯಾಖ್ಯಾನ ಒರೆದು ತಮ್ಮ ತಮ್ಮ ಮತವನ್ನು ಸ್ಥಾಪಿಸಿದ್ದಾರೆ. ಒಂದೇ ಸೂತ್ರಗ್ರಂಥವಾದರೂ ಆಚಾರ್ಯರ ದೃಷ್ಟಿಭೇದದಿಂದ ಬೇರೆ ಬೇರೆ

ಮತಗಳೆ—ಹಲವುಬಾರಿ ವಿರುದ್ಧವಾದ ವಾದಗಳುಳ್ಳ ಮತಗಳೆ—ಆವಿರ್ಭಾವಕ್ಕೆ ಕಾರಣವಾಯಿತು. ಮೇಲೆ ಹೇಳಿದ ಮಹನೀಯರ ಭಾಷ್ಯಗಳು ಬರುವ ಮುನ್ನವೇ ಉಪನಿಷದ್ವಾಕ್ಯಗಳ ಅರ್ಥ ವಿವರಣೆಯಲ್ಲಿ ಹಲವು ಸಂಪ್ರದಾಯಗಳು ಏರ್ಪಟ್ಟಿದ್ದುವು. ಅಂತೆಯೇ ಶ್ರೀ ರಾಮಾನುಜರೂ ತಮ್ಮ ಭಾಷ್ಯವನ್ನು ಆರಂಭ ಮಾಡುತ್ತ ತಾವು ಸೂತ್ರಗಳನ್ನು ವೃತ್ತಿಕಾರರಾದ ಬೋಧಾಯನ ಮತ್ತು ಟಂಕ, ಗುಹದೇವ, ದ್ರಮಿಡಾಚಾರ್ಯರೆಂಬ ಭಾಷ್ಯಕಾರರು, ಭಾರುಚಿ, ಕಪರ್ದಿ ಮುಂತಾದವರು ತೋರಿಸಿರುವ ರೀತಿಯಲ್ಲಿಯೇ ವ್ಯಾಖ್ಯಾನ ಮಾಡಲಾಗುತ್ತದೆ ಎಂದು ಸಾರಿದ್ದಾರೆ. ಆದುದರಿಂದ ಬ್ರಹ್ಮಸೂತ್ರಗಳ ಮೇಲೆ ಬರೆದಿರುವ "ಶ್ರೀಭಾಷ್ಯ" ದಲ್ಲಿ ಏನೋ ಯಾವುದೋ ಸಂಪ್ರದಾಯ ವಿರುದ್ಧವಾದ ನವೀನವಾದ ಅರ್ಥಕಲ್ಪನೆ ಇರುವುದರ ಬದಲು, ಸಂಪ್ರದಾಯದ ಜಾಡನ್ನೇ ಹಿಡಿದು ಹೊಸ ರೀತಿಯಲ್ಲಿ ಹಳೆಯ ಅರ್ಥವನ್ನು ಸಮಗ್ರವಾಗಿ ಸಮನ್ವಯಿಸಿರುವುದು ಕಂಡು ಬರುತ್ತದೆ. ಬಾದರಾಯಣನ ಸೂತ್ರಗಳಲ್ಲಿ ಕಾಣಬರದಿರುವ ಸಗುಣ=ನಿರ್ಗುಣ ಬ್ರಹ್ಮರೆಂಬ ಬ್ರಹ್ಮದ್ವಯಕಲ್ಪನೆಗೆ ಅವಕಾಶ ಮಾಡಿಕೊಂಡಿರುವ ಅದ್ವೈತಕ್ಕಿಂತಲೂ ಇಲ್ಲಿ ಸೂತ್ರಗಳನ್ನು ಯಥಾರ್ಥವಾಗಿ ಉಪಪಾದನೆ ಮಾಡಿದೆ ಎಂದು ಕೆಲವು ಪಂಡಿತರ ಅಭಿಪ್ರಾಯ; ಅನೇಕ ವಿದ್ವಾಂಸರ ಮತವೇನೆಂದರೆ, ಬಾದರಾಯಣ ಸೂತ್ರಗಳಲ್ಲಿ ಅದ್ವೈತಕ್ಕಿಂತಲೂ ವಿಶಿಷ್ಟಾದ್ವೈತಕ್ಕೂ ಇದನ್ನೇ ಬಹುಮಟ್ಟಿಗೆ ಹೋಲುವ ದ್ವೈತಕ್ಕೂ ಆಧಾರ ದೊರೆಯುತ್ತದೆ ಎಂದು.

ಪರಮಾತ್ಮನು ಸ್ವತಃ ಋಷಿಗಳಿಗೆ ಅನುಗ್ರಹಿಸಿದ ಜ್ಞಾನವೇ "ವೇದ" ವೆಂಬುದೆಂದು ಹೇಳಿಯಾಗಿದೆ. ಈ "ವೇದ"ದಂತೆಯೇ ಆ ಜನರಿಗಲ್ಲದೆ ಇನ್ನುಳಿದ ಅನೇಕರಿಗೂ ಪರಮಾತ್ಮನ ಅನುಗ್ರಹದಿಂದ ಆತನ ಸಾಕ್ಷಾತ್ಕಾರವಾದಾಗ ಅವರು ಭಾವಾವೇಶದಲ್ಲಿ ಹಾಡಿದ ಹಾಡುಗಳೂ ಹೇಳಿದ ಮಾತುಗಳೂ ವೇದದಷ್ಟೇ ಪ್ರಮಾಣವೆಂದು ಒಪ್ಪಲೇಬೇಕು. ಪರತತ್ವದ ಅನುಭವದ ವಸ್ತು ಒಂದೇ. ಅನುಭವವನ್ನು ಹೇಳುವ ಭಾಷೆ ಯಾವುದಾದರೇನು ? ಅನುಭವ ಮಾಡುವ ಭಕ್ತನಿಗೆ ಜನ್ಮವೃತ್ತಿಗಳು ಸಾಧಕಬಾಧಕಗಳಾಗಲಾರವು. ಪ್ರಪಂಚದ ಅನೇಕ ಭಾಗಗಳಲ್ಲಿ ವಾಸಿಸುತ್ತಿದ್ದ, ವಾಸಿಸುತ್ತಿರುವ ಅನುಭವಿಗಳು ತಮ್ಮ ತಮ್ಮ ಅಪರೋಕ್ಷಾನುಭೂತಿಯ (Mystic Experience)

ಬಗ್ಗೆ ಮಾತಾಡಿದಾಗ, ಆ ಎಲ್ಲ ಮಾತಿನ ಹಿಂದೆ ಇರುವ ವಸ್ತು ಒಂದಿದ್ದು ಮಿಕ್ಕೆಲ್ಲದಕ್ಕೆ ಆಧಾರವಾಗಿ, ಕಾರಣವಾಗಿ, ದ್ಯೋತಕವಾಗಿದೆ ಎಂಬುದು ಕಾಣುತ್ತದೆ. ಇಂತಹ ಅಪರೋಕ್ಷಾನುಭೂತಿಯಲ್ಲಿ ಹಾಡಿದ ಹಾಡುಗಳೇ ತಮಿಳಿನಲ್ಲಿರುವ "ದಿವ್ಯಪ್ರಬಂಧಗಳು." ದೇವರನ್ನು ಸಾಕ್ಷಾತ್ಕರಿಸಿಕೊಂಡ ಮಂತ್ರದ್ರಷ್ಟೃಗಳಾದ ಋಷಿಗಳ ಮಾತಿನಂತೆಯೇ ಪ್ರಬಂಧಗಳನ್ನು ಹಾಡಿದ ಆಳ್ವಾರುಗಳ ಹಾಡೂ ಪ್ರಮಾಣ, ವಿಶ್ವಾಸಾರ್ಹ, ಶ್ರೇಯಸ್ಕರ. ಶ್ರೀ ಶಠಕೋಪ, ಮಧುರಕವಿ, ಕುಲಶೇಖರರಲ್ಲದೆ ಇವರೆಲ್ಲರಿಗೂ ಬಹಳ ಹಿಂದೆ ಇದ್ದ ಭೂತಯೋಗಿ, ಸರೋಯೋಗಿ, ಮಹಾಯೋಗಿಯೇ ಮುಂತಾಗಿ ಪ್ರಬಂಧರೂಪದಲ್ಲಿ ತಮ್ಮ ಅನುಭವಕ್ಕೆ ಬಂದ ಆನಂದವನ್ನು ಹೊರಚೆಲ್ಲಿದ್ದಾರೆಂದು ಹೇಳಬಹುದಾಗಿದೆ. ಶ್ರೀ ಶಠಕೋಪರ ಬಗ್ಗೆಯಂತೂ "ವೇದವನ್ನು ತಮಿಳಿನಲ್ಲಿ ಮಾಡಿದವರೆಂಬ" ಖ್ಯಾತಿ ಇದೆ. ಮಿಕ್ಕೆಲ್ಲ ದರ್ಶನಗಳಿಗೂ ಸಿದ್ಧಾಂತಗಳಿಗೂ ಸಿಕ್ಕದಿರುವ ಒಂದು ಅಪೂರ್ವವಾದ ಆಕರ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಈ ಪ್ರಬಂಧಗಳಲ್ಲಿ ದೊರೆತಿರುವುದು ಗಮನಾರ್ಹನಾದ ಅಂಶ. ವಿಶಿಷ್ಟಾದ್ವೈತ ಸಿದ್ಧಾಂತದ ಮೂಲವನ್ನು ವೇದದಲ್ಲಿ, ಉಪನಿಷತ್ತುಗಳಲ್ಲಿ ಇತಿಹಾಸಗಳಲ್ಲಿ, ಪಾಂಚರಾತ್ರಾಗಮದಲ್ಲಿ, ಬಾದರಾಯಣರ ಬ್ರಹ್ಮಸೂತ್ರಗಳಲ್ಲಿ, ಅತಿಪ್ರಾಚೀನರಾದ ವೃತ್ತಿಕಾರ ಭಾಷ್ಯಕಾರರ ಸತ್ಸಂಪ್ರದಾಯದಲ್ಲಿ ಹೇಗೆ ಸ್ಪಷ್ಟವಾಗಿ ಕಾಣಬಹುದೋ ಹಾಗೆಯೇ ಅಷ್ಟೇ ಸ್ಪಷ್ಟವಾಗಿ ಪ್ರಬಂಧಗಳಲ್ಲೂ ಸಹ ಕಾಣಬಹುದು. ಮಿಕ್ಕೆಲ್ಲ ಮತಗಳಿಗೆ ಪ್ರಸ್ಥಾನತ್ರಯವಾದರೆ, ಇಲ್ಲಿ ವೇದ, ಭಗವದ್ಗೀತೆ, ಬ್ರಹ್ಮಸೂತ್ರ, ಪ್ರಬಂಧಗಳೆಂಬುದಾಗಿ ಪ್ರಸ್ಥಾನ ಚತುಷ್ಟಯ ಸಿದ್ಧವಾಗುವುದು; ಅಷ್ಟೊ ಅಷ್ಟು ಪರಿಷ್ಕೃತವಾಗಿ ವಿಶಿಷ್ಟಾದ್ವೈತ ಸಿದ್ಧಾಂತ ದೃಢಮೂಲವಾಯಿತು.

ಮೇಲೆ ಹೇಳಿದುದಷ್ಟೂ ವಿಶಿಷ್ಟಾದ್ವೈತದ ಪ್ರಾಚೀನತೆಯನ್ನು ಆ ಸಿದ್ಧಾಂತ ಬೆಳೆದುಬಂದ ರೀತಿಯನ್ನೂ ಕುರಿತ ನಾಲ್ಕು ಮಾತುಗಳು. ಈಗಲಾದರೋ, ಈ ಸಿದ್ಧಾಂತವನ್ನು ಯುಕ್ತಿಯಿಂದ ಸಮರ್ಥಿಸಿ ಮಿಕ್ಕ ಸಿದ್ಧಾಂತಗಳನ್ನು ಆಕ್ಷೇಪಗಳಿಂದ ಖಂಡಿಸಿ, ಮತ್ತೆ ಏಳುವ ಆಕ್ಷೇಪಗಳಿಗೆ ಪ್ರತ್ಯುಕ್ತಿ ಸಮಾಧಾನಗಳನ್ನು ಕೊಟ್ಟು ಸ್ಥಾಪಿಸಬೇಕಾಗಿ ಬಂದುದಾದರೂ ಏಕೆ ಎಂಬುದನ್ನು ವಿಚಾರಮಾಡಲು ಪ್ರಯತ್ನಮಾಡೋಣ. ಉಪನಿಷತ್ತಿನ ಜ್ಞಾನವು

ಕಾಲಕ್ರಮೇಣ ಅತ್ತಿತ್ತ ಎಳೆಯಲ್ಪಟ್ಟು, ವಿವಿಧವಾದ ಯುಕ್ತಿಗಳಿಂದ ಕಲು ಷಿತವಾಗಿ ಕಾಣಬಾಗತೊಡಗಿತು. ಅಂತೆಯೇ ಶ್ರುತಿ ಪ್ರಾಮಣ್ಯವೇ ಧಕ್ಕೆ ಹೊಂದುವ ಕಾಲ ಒದಗಿತು. ನಾಸ್ತಿಕದರ್ಶಗಳೆನಿಸಿದ ಚಾರ್ವಾಕ ಜೈನ ಬೌದ್ಧರೊಡನೆ ವಾದಿಸಹೊರಟ ನ್ಯಾಯವೈಶೇಷಿಕಸಾಂಖ್ಯಪಾತಂಜಲರೂ ಸಹ ಶ್ರುತಿ ಪ್ರಾಮಾಣ್ಯವನ್ನು ಒಪ್ಪಿದರೂ ಶ್ರುತಿಪ್ರತಿಪಾದಿತನಾದ ಈಶ್ವರನ ಬಗ್ಗೆ ಬೇಕೋ ಬೇಡವೋ ಎಂಬಂತೆ ಒಪ್ಪಿಕೊಂಡರು. ಇದರಿಂದ ಲೋಕ ಕಲ್ಯಾಣದ ದಾರಿ ಸುಗಮವಾಗದಾಯಿತು. ಪೂರ್ವಮೀಮಾಂಸಕರು ವೇದವನ್ನೇ ಪರಮ ಪ್ರಮಾಣವೆಂದರೂ, ನಿರೀಶ್ವರತೆಯ ಸೋಂಕಿಗೊಳಗಾದರು. ಈಶ್ವರ ನನ್ನು ಒಪ್ಪಿಕೊಂಡ ಮೀಮಾಂಸಕರಾದರೂ ಹೆಚ್ಚುಕಡಿಮೆ ವಿಶಿಷ್ಟಾದ್ವೈತ ಸಿದ್ಧಾಂತದೊಳಗೇ ಬಂದು ಸೇರುವರೆಂಬ ಅಂಶವನ್ನು ಶ್ರೀ ವೇದಾಂತದೇಶಿಕರು ಬರೆದಿರುವ "ಸೇಶ್ವರ ಮೀಮಾಂಸಾ" ಎಂಬ ಗ್ರಂಥದಲ್ಲಿಯೂ, ಇನ್ನೂ ಹಲವು ಕಡೆಗಳಲ್ಲಿಯೂ ಕಾಣಬಹುದು. ಉಪನಿಷದ್ವಾಕ್ಯಗಳ ಅರ್ಥವನ್ನೇ ಹಿಡಿದು ಪ್ರವೃತ್ತವಾದ ಅದ್ವೈತದರ್ಶನವೂ ಸರ್ವಸಾಮಾನ್ಯವಾದ ಪೂರ್ಣ ಸಮಾಧಾನವನ್ನು ಜನರಲ್ಲಿ ಉಂಟುಮಾಡಲಿಲ್ಲ. ಅಲ್ಲಿನ ನಿರ್ಗುಣ 'ಬ್ರಹ್ಮ'ವು ಸಗುಣ ಬ್ರಹ್ಮನಿಂದ ಈಶ್ವರನನ್ನು ಮರೆಸಿ, ಸಾಮಾನ್ಯ ಜನರಿಗೂ–ವಿದ್ವಾಂಸರಿಗೂ ಸಹ–ಭಕ್ತಿಗೆ, ಉಪಾಸನೆಗೆ ಯಾವೊಂದು ಆಧಾರವಿರದಂತಾಯಿತು. ಅದ್ವೈತಾನುಭವವು ಯಾರೋ ಕೆಲವರಿಗೆ ಕೆಲವುವೇಳೆ ಆಯಿತು. ಈಗಲೂ ಆಗುತ್ತಿರಬಹುದು, ಮುಂದೆಯೂ ಆಗಬಹುದು. ಆದರೂ ಅದು ಎಲ್ಲರಿಗೂ ನಿಲುಕುವಂತಾಗಲಿಲ್ಲ. ಬುದ್ಧಿ, ಭಾವಗಳನ್ನು ಸಮರಸವಾಗಿ ಬೆಳೆಸಿಕೊಂಡು ಜೀವನ ಸಾಗಿಸಲು ಇದು ಅಷ್ಟು ಸಹಾಯ ಮಾಡಿದಂತೆ ತೋರುವುದಿಲ್ಲ. ಒಟ್ಟಿನಲ್ಲಿ ಅದ್ವೈತವು ವೈದಿಕ ಸಂಪ್ರದಾಯಕ್ಕೆ ಬಹಳ ಸಹಾಯ ಮಾಡಿದರೂ ಬುದ್ಧ್ಯತೀತವಾಗಿದ್ದರೂ ಭಾವ ಪೋಷಣೆಗೆ ತಕ್ಕಷ್ಟು ಸಹಾಯ ಮಾಡದೆ ಹೋದುದರಿಂದ ಎಲ್ಲರ ಆದರಕ್ಕೆ ಪಾತ್ರವಾಗಲಿಲ್ಲ. ಆದುದರಿಂದಲೇ, ವಿಶಿಷ್ಟಾದ್ವೈತವು ವೇದವೇದಾಂತಪುರಾಣೇತಿಹಾಸಾಗಮ ಬ್ರಹ್ಮಸೂತ್ರಗಳಲ್ಲಿ ಪ್ರತಿಪಾದಿತವಾಗಿದ್ದುದು, ದ್ರಾವಿಡಪ್ರಬಂಧಗಳಲ್ಲಿ ಅನುಭವಿಗಳ ಅನುಭವದಲ್ಲಿ ಗೋಚರವಾದುದು ಶ್ರೀ ರಾಮಾನುಜಾಚಾರ್ಯರಿಂದ ಸಿದ್ಧಾಂತರೂಪದಲ್ಲಿ ಆವಿರ್ಭಾವವನ್ನು ಹೊಂದಬೇಕಾಯಿತು. ಈ ಚಿಕ್ಕ

ಪುಸ್ತಕದಲ್ಲೇ ಮುಂದಿನ ಕೆಲವು ಪುಟಗಳಲ್ಲಿ ವಿಶಿಷ್ಟಾದ್ವೈತಕ್ಕೂ ಮಿಕ್ಕೆಲ್ಲ ದರ್ಶನಗಳಿಗೂ ಇರುವ ಸಾಮ್ಯ ವೈಷಮ್ಯಗಳನ್ನು ಸಾಕಷ್ಟು ವಿಸ್ತಾರವಾಗಿ ಕಾಣಬಹುದು. ಈ ಹಿನ್ನೆಲೆಯಲ್ಲಿ ಶ್ರೀ ರಾಮಾನುಜಾಚಾರ್ಯರ ಕಾರ್ಯವನ್ನೂ ವಿಶಿಷ್ಟಾದ್ವೈತ ಸಿದ್ಧಾಂತದ ಔಚಿತ್ಯವನ್ನೂ ಸತ್ಯತೆಯನ್ನೂ ಕಾಣಬಹುದು.

ವಿಶಿಷ್ಟಾದ್ವೈತ ಸಿದ್ಧಾಂತದ ಪ್ರಥಮಾಚಾರ್ಯ ಭಗವಾನ್ ಶ್ರೀಮನ್ನಾರಾಯಣನೇ. ವೇದ ಆತನ ಮಾತು; ಪಾಂಚರಾತ್ರಾಗಮ ಆತನಿಂದ ಉಪದಿಷ್ಟವಾಗಿದೆ. ಆಳ್ವಾರುಗಳು ಹಾಡಿದ ದಿವ್ಯ ಪ್ರಬಂಧಗಳು ಆತನನ್ನು ಸಾಕ್ಷಾತ್ತಾಗಿ ಕಂಡಾಗ ಭಾವಾವೇಶದಲ್ಲಿ ಆಡಿದ ಮಾತುಗಳು; ಆತನಾಡಿಸಿದ ಮಾತುಗಳು. ಹೀಗೆ ಗುರುಪರಂಪರೆ. ವೀರನಾರಾಯಣಪುರದ ನಾಥಮುನಿಗಳು, ಆ ವೇಳೆಗೆ ನಷ್ಟಪ್ರಾಯವಾಗಿದ್ದ ಪ್ರಬಂಧಗಳನ್ನು ಶ್ರೀ ಶಠಕೋಪರ ಪ್ರಸಾದದಿಂದ ಪುನಃ ಸಂಗ್ರಹಿಸಿ ಪ್ರಚಾರಗೊಳಿಸಿದರು. ಅವರ ಶಿಷ್ಯರಾದ ಪುಂಡರೀಕಾಕ್ಷರೂ, ಪುಂಡರೀಕಾಕ್ಷರ ಶಿಷ್ಯರಾದ ರಾಮಮಿಶ್ರರೂ ಶ್ರೀವೈಷ್ಣವ ಸಂಪ್ರದಾಯವನ್ನು ರಕ್ಷಿಸಿಕೊಂಡು ಬಂದರು. ಅವರ ತರುವಾಯ ಕ್ರಿ. ಶ. ೯೧೬ ರ ವೇಳೆಗೆ ರಾಮಮಿಶ್ರರ ಮಗ "ಯಾಮುನಾಚಾರ್ಯ"ರು ಬಂದು ಶ್ರೀವೈಷ್ಣವ ಸಿದ್ಧಾಂತಕ್ಕೂ ಸಂಪ್ರದಾಯಕ್ಕೂ ಪ್ರತಿಷ್ಠೆ ಬರುವಂತೆ ಮಾಡಿದರು. "ಆಳವಂದಾರ್ (ಆಳಲು ಬಂದವರು)" ಎಂದು ಹೆಸರು ಹೊತ್ತ ಯಾಮುನಾಚಾರ್ಯರು ಅತಿ ಸುಂದರವಾಗಿರುವ "ಸ್ತೋತ್ರರತ್ನ" ವನ್ನೂ, "ಸಿದ್ಧಿತ್ರಯ" ಮತ್ತು "ಆಗಮಪ್ರಾಮಾಣ್ಯ" ಎಂಬ ಎರಡು ಅಮೂಲ್ಯ ಗ್ರಂಥಗಳನ್ನೂ ಬರೆದು ಮುಂದೆ ಬರಲಿದ್ದ ಸಿದ್ಧಾಂತಕ್ಕೆ ಅಡಿಗಲ್ಲನ್ನು ಹಾಕಿದರು. ಆದರೆ ಮಿಕ್ಕೆಲ್ಲ ದರ್ಶನಗಳ ಸಮಕ್ಕೆ—ಅವಕ್ಕಿಂತ ಒಂದು ಕೈ ಮೇಲೆನ್ನುವಂತೆ—ವಿಶಿಷ್ಟಾದ್ವೈತವನ್ನು ಎತ್ತಿಹಿಡಿದು ಜಗತ್ತಿನ ಎಲ್ಲ ಜೀವಿಗಳ ಮೋಕ್ಷಕ್ಕೂ ಹೆದ್ದಾರಿಯನ್ನು ತೋರಿದ ಕೀರ್ತಿ ಶ್ರೀ ರಾಮಾನುಜಾಚಾರ್ಯರದು.

# ಜೀವನ ಚರಿತ್ರೆ

ಆಳವಂದಾರರ ಶಿಷ್ಯರಾದ ತಿರುಮಲೈನಂಬಿ ಎಂಬವರಿಗೆ ಕಾಂತಿಮತೀ (ಭೂಮಿಪ್ಪಿರಾಟ್ಟಿ) ಮತ್ತು ದ್ಯುತಿಮತೀ (ಪೆರಿಯಪ್ಪಿರಾಟ್ಟಿ) ಎಂಬ ಇಬ್ಬರು ತಂಗಿಯರಲ್ಲಿ, ಮೊದಲನೆಯ ಕಾಂತಿಮತಿಯನ್ನು ಹಲವಾರು ಕ್ರತುಗಳನ್ನು ಮಾಡಿ ಪವಿತ್ರರಾದ — ಆಸೂರಿ ಕೇಶವಸೋಮಯಾಜಿ ಮದುವೆಯಾದರು; ದ್ಯುತಿಮತಿಯನ್ನು ಮಳಲೈಮಂಗಲದ ಕಮಲನಯನಭಟ್ಟರು ಮದುವೆಯಾದರು. ಕೇಶವಸೋಮಯಾಜಿ ಇದ್ದುದು ಶ್ರೀಪೆರಂಬೂದೂರಿನಲ್ಲಿ— ಮದರಾಸು ಆಧಿಪತ್ಯದಲ್ಲಿ ತಿರುವಳ್ಳೂರಿಗೆ ೧೦ ಮೈಲು ದೂರದಲ್ಲಿ. ಶಕ ೯೩೯ನೆಯ* ಪಿಂಗಳ ಸಂವತ್ಸರ ಚೈತ್ರ ಶುದ್ಧ ಪಂಚಮೀ ಗುರುವಾರ ಆದ್ರಾ್ರ ನಕ್ಷತ್ರದ ದಿನ ಶುಭಕಟಕ ಲಗ್ನದಲ್ಲಿ ಕಾಂತಿಮತೀದೇವಿಯ ಗರ್ಭದಲ್ಲಿ ಶ್ರೀರಾಮಾನುಜರು ಜನಿಸಿದರು. ಪುತ್ರೋತ್ಸವದೊಡನೆಯೇ ಕೇಶವಸೋಮಯಾಜಿ ಜಾತಕರ್ಮಾದಿಗಳನ್ನು ನೆರವೇರಿಸಿದರು. ಇತ್ತ ದ್ಯುತಿಮತೀ ದೇವಿಯ ಹೊಟ್ಟೆಯಲ್ಲೂ ಪುತ್ರರೊಬ್ಬರು ಜನಿಸಿದರು; ಅವರಿಗೆ "ಗೋವಿಂದ" ಎಂದು ನಾಮಕರಣವಾಯಿತು. ಕಾಲಕ್ರಮದಲ್ಲಿ ರಾಮಾನುಜರಿಗೆ ಚೌಲೋಪನಯನಗಳು ನೆರವೇರಿ, ವೇದವೇದಾಂಗಗಳ ಅಧ್ಯಯನವೂ ಇತರ ಶಾಸ್ತ್ರಗಳ ಪರಿಚಯವೂ ಆದುವು. ಹದಿನಾರನೆಯ ವಯಸ್ಸಿನಲ್ಲಿ ಗೃಹಸ್ಥಾಶ್ರಮವನ್ನು ಸ್ವೀಕರಿಸಿದುದೂ ಆಯಿತು, ಆದರೆ ಜ್ಞಾನಾರ್ಜನೆಗಾಗಿ ಪ್ರಯತ್ನ ನಿಲ್ಲಲಿಲ್ಲ. ಕಾಂಚಿಯ ಬಳಿ ತಿರುಪುಟ್ಕುಳಿ ಎಂಬ ಗ್ರಾಮದಲ್ಲಿ ಯಾದವಪ್ರಕಾಶನೆಂಬ ದೊಡ್ಡ ವಿದ್ವಾಂಸನೂ ಯತಿಯೂ ಅದ್ವೈತ ವೇದಾಂತದ ಪ್ರವಚನ ಮಾಡುತ್ತಾನೆಂದು ತಿಳಿದು ರಾಮಾನುಜರು ಆತನಲ್ಲಿ ಶಿಷ್ಯವೃತ್ತಿಯನ್ನವಲಂಬಿಸಿದರು. ಚಿಕ್ಕಮ್ಮನ ಮಗನಾದ ಗೋವಿಂದನೂ ಅಲ್ಲಿಗೇ ಜ್ಞಾನಾರ್ಜನೆಗಾಗಿ ಬಂದನು.

ಒಮ್ಮೆ ಯಾದವಪ್ರಕಾಶನು "ಸತ್ಯಂಜ್ಞಾನಮನನ್ತಂಬ್ರಹ್ಮ" * ಎಂಬ ವಾಕ್ಯವನ್ನು ವಿವರಿಸುತ್ತಾ "ಬ್ರಹ್ಮ ಸತ್ಯವೂ, ಜ್ಞಾನವೂ ಅನಂತವೂ ಆಗಿದೆ"

---

* ಕ್ರಿಸ್ತಶಕ ೧೦೧೭ (ಆ. ಗೋವಿಂದಾಚಾರ್ಯರ "Life of Ramanuja")
ತೈತ್ತಿರಿಯೋಪನಿಷತ್ತು II, 1, 1,

ಎಂದು ಹೇಳಿ, ಸತ್ಯಜ್ಞಾನಅನಂತವೆಂಬ ಗುಣಗಳು ಬ್ರಹ್ಮನಲ್ಲಿ ಒಟ್ಟಿಗೆ ಇರಲಾರವು ; 'ಕೊಂಬಿಲ್ಲದಿರುವಿಕೆ, ಕೊಂಬಿರುವಿಕೆ, ಮುರಿದ ಕೊಂಬಿರುವಿಕೆ, ಈ ಮೂರೂ ಹೇಗೆ ಒಂದೇ ಆಕಳಲ್ಲಿ ಇರಲಾರವೋ ಹಾಗೆಂದು ಹೇಳಿ, ಬ್ರಹ್ಮ ಸುಗುಣವಾಗಿರಲಾರದೆಂದು ಸಾಧಿಸಿದನು. ಇದನ್ನು ಕೇಳಿ ರಾಮಾನುಜರಿಗೆ ವ್ಯಥೆಯಾಗಿ ಆ ವಾಕ್ಯದ ನಿಜವಾದ ಅರ್ಥ ಬೇರೆಯೆಂದು ಗುರುವಿನಲ್ಲಿ ಅರಿಕೆ ಮಾಡಿಕೊಂಡರು. ಯಾದವಪ್ರಕಾಶ ಕೊಂಚ ಬೆಚ್ಚಿ " ಹಾಗಾದರೆ ನಿನ್ನ ಅರ್ಥವೇನು ? " ಎಂದು ಕೇಳಿದಾಗ ರಾಮಾನುಜರು " ವಾಕ್ಯದಲ್ಲಿ ಎದ್ದು ಕಾಣುವ ಅರ್ಥವನ್ನು ಬಿಟ್ಟು ಬೇರೆ ಯಾವುದೋ ಅರ್ಥವನ್ನು ಕಲ್ಪಿಸುವುದು ತರವಲ್ಲ. ' ಬ್ರಹ್ಮ ಸತ್ಯ ' ಎಂದು ಹೇಳಿದೆಯೇ ವಿನಾ ' ಬ್ರಹ್ಮ ಸತ್ಯವಲ್ಲ' ಎಂಬ ಮಾತಿಲ್ಲದಿರುವುದರಿಂದ ಗುಣಗಳನ್ನು ನಿಷೇಧಿಸಿದಂತಾಗಿಲ್ಲ; ಹಾಗೆ ಗುಣಗಳನ್ನು ನಿಷೇಧಿಸಲು ಹೊರಟರೆ ಬ್ರಹ್ಮ ಅಭಾವವೂ ಶೂನ್ಯವೂ ಆದೀತು. ಬ್ರಹ್ಮ ಇದೆ ಅಂದರೆ, ಬ್ರಹ್ಮದಲ್ಲಿ ಗುಣಗಳಿವೆ ಎಂದೇ ಸರಿ. ಅಲ್ಲದೆ ಸತ್ಯಾದಿಗಳು ಬ್ರಹ್ಮದಲ್ಲಿ ಸಮಾನಾಧಿಕರಣವಾಗಲು ಯಾವ ಬಾಧಕವೂ ಇಲ್ಲ; ಒಂದೇ ಎಡೆಯಲ್ಲಿ ಬೆಳಕು ಕತ್ತಲೆಗಳೆಂಬ ಪರಸ್ಪರ ವಿರುದ್ಧಧರ್ಮಗಳಿರಲಾರವು; ಆದರೆ ಸತ್ಯಜ್ಞಾನಅನಂತ ಎಂಬ ಧರ್ಮಗಳು ಪರಸ್ಪರ ವಿರುದ್ಧಗಳಲ್ಲ; ಪುಷ್ಪ ಕೆಂಪಗೂ, ಮೃದುವಾಗಿಯೂ, ಸುಗಂಧಭರಿತವಾಗಿಯೂ ಇರಬಹುದಷ್ಟೆ; ಸೂರ್ಯನಲ್ಲಿ ಬಿಸಿಬೆಳಕುಗಳಿವೆಯಷ್ಟೆ. ಬ್ರಹ್ಮಸತ್ಯ ಎಂದರೆ ಎಲ್ಲ ಕಾಲದಲ್ಲಿಯೂ ಇರುವುದು ಎಂಬ ಕಾಲಿಕವಾದ ನಿತ್ಯತೆ; ಜ್ಞಾನ ಎಂದರೆ ಚೈತನ್ಯ—ಅಚಿತ್ತಾದ ಕಲ್ಲು ಮರ ದೇಹಾದಿಗಳಿಂದ ಭಿನ್ನ ಎಂದು; ಅನಂತವೆಂಬುದರಿಂದ ಮೇರೆಯಿಲ್ಲದುದು, ಉಪಾಧಿರಹಿತವಾದುದು ಎಂದು ಹೇಳಿ ದೇಶ ಪ್ರಕಾರಗಳ ಬಗ್ಗೆ ಹೇಳಿದಂತಾಯಿತು " ಎಂದು ಹೇಳಲು, ಗುರು " ನೀನು ನನ್ನೊಡನೆ ವಾದಿಸುವೆಯಾ ? " ಎಂದನು.

ಇನ್ನೊಮ್ಮೆ ರಾಮಾನುಜರು ಯಾದವನಿಗೆ ಎಣ್ಣೆಯೊತ್ತುತ್ತಿದ್ದಾರೆ; ಪ್ರವಚನ ನಡೆಯುತ್ತಿದೆ; ವಾಕ್ಯ "ತಸ್ಯಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ " * ಎಂಬುದು. ಅರ್ಥ ಹೇಳುತ್ತ ' ಕಪ್ಯಾಸ ' ಎಂಬುದು ' ಕಪಿಯ

---

*ಛಾಂದೋಗ್ಯೋಪನಿಷತ್ತು, I. 6, 7.

ಪೃಷ್ಠ ' ವೆಂದು ಹೇಳಿ ' ಭಗವಂತನ ಕಣ್ಣುಗಳು ಕಪಿಪೃಷ್ಠದಂತೆ ಕೆಂಪಗಿವೆ ' ಎಂದಾಗ ರಾಮಾನುಜರ ಕಣ್ಣಿನಿಂದ ಶೋಕಾಶ್ರುವೊಂದು ಯಾದವನ ತೊಡೆಯಮೇಲೆ ಬಿದ್ದಿತು. ಯಾದವ ತಲೆಯೆತ್ತಿ ನೋಡಿ, " ಏಕೆ, ರಾಮಾನುಜ, ನಿನ್ನ ಮನಸ್ಸಿಗೆ ದುಃಖವಾದುದು ಯಾವುದು " ಎಂದಾಗ ರಾಮಾನುಜರು, " ಸ್ವಾಮಿ, ಭಗವಂತನ ಕಣ್ಣುಗಳನ್ನು ಕುರಿತು ಮಾತ ನಾಡುತ್ತ, ಅಶ್ಲೀಲವಾದ ಅರ್ಥ ಬಂದಿತು; ಮನಸ್ಸಿಗೆ ಬಹು ನೋವಾಯಿತು " ಎಂದರು. ಗುರು " ಹಾಗೋ, ನಿನ್ನ ಅರ್ಥವೇನು ಹೇಳು " ಎಂದು ಕೇಳಲು, ರಾಮಾನುಜರು, "ಕಂ ಪಿಬತಿ — ನೀರನ್ನು ಕುಡಿಯುವ. ಶೋಷಿಸುವ ಸೂರ್ಯನು ಆಸ—ಉಪವೇಶನೇ ವಿಕಸನೇಚ ಎಂಬುದರಿಂದ ಸೂರ್ಯನು ಆಶ್ರಯಣವಾಗಿ ಉಳ್ಳ ಕಮಲ 'ಕಪ್ಯಾಸ' ; ಭಗವಂತನ ಕಣ್ಣುಗಳು ಬಿರಿದ ಕೆಂದಾವರೆಯಂತೆ ಸುಂದರವಾಗಿವೆ ಎಂಬುದರ ಬದಲು ಅನುಚಿತಾರ್ಥವನ್ನು ಕೇಳಿ ಮನಸ್ಸಿಗೆ ಸಂಕ ಟವಾಯಿತು " ಎಂದರು. ಯಾದವನಿಗೆ ಕೋಪ ಮಿತಿಮೀರಿತು. " ನಮ್ಮ ಅರ್ಥ ನಿಮಗೆ ಸರಿತೋರದಿದ್ದರೆ ನೀವು ಬೇರೆಡೆ ಹೊರಡಿ " ಎಂದು ಗದರಿಸಿ ದನು. ರಾಮಾನುಜರೂ ಹೊರಡಬೇಕಾಯಿತು.

ರಾಮಾನುಜರು ಬೇರೆ ಹೋದುದರಿಂದಲೇ ಯಾದವನಿಗೆ ಸಮಾಧಾನ ವಾಗಲಿಲ್ಲ; ಮೊದಲಿಗಿಂತಲೂ ಚಿತ್ತಕ್ಷೋಭೆ ಅಧಿಕವಾಯಿತು. ಮುಂದೆ ಅದ್ವೈತದ ಮೂಲವನ್ನೇ ಕತ್ತರಿಸುವ ಮತ್ತು ತನ್ನ ಪ್ರತಿಷ್ಠೆಗೆ ಧಕ್ಕೆ ತಂದಿ ರುವ ಈತನನ್ನು ಹೇಗಾದರೂ ಇಲ್ಲದಂತಾಗಿಸಿದರೆ ಒಳಿತೆನ್ನಿಸಿತು. ಕ್ರೋಧಾ ಸೂಯೆಗಳ ವಶನಾದ ಯಾದವ ಧರ್ಮಾಧರ್ಮವಿವೇಕವನ್ನು ನೀಗಿಕೊಂಡು ರಾಮಾನುಜರು ಇಲ್ಲದಂತೆ ಮಾಡುವುದಕ್ಕೆ ಉಪಾಯಚಿಂತನೆ ಮಾಡಿದ; ಪಾಪದ ಲೇಪ ತೋರದಂತಿರಬೇಕು,ಅಪವಾದ ಬಾರದಂತಿರಬೇಕು, ಕೆಲಸ ಆಗ ಬೇಕೆಂದು ಶಿಷ್ಯರೊಡನೆ ಆಲೋಚಿಸಿ ಕಾಶಿಯಲ್ಲಿನ ಮಣಿಕರ್ಣಿಕಾ ಘಟ್ಟದಲ್ಲಿ ರಾಮಾನುಜರನ್ನು ಗಂಗೆಯ ಪಾಲು ಮಾಡಬೇಕೆಂಬ ದುರಭಿಸಂಧಿ ಹುಟ್ಟಿತು; ಕಾಶೀಯಾತ್ರೆಯ ಸಿದ್ಧತೆಯೂ ನಡೆಯಿತು. ಪುನಃ ರಾಮಾನುಜರನ್ನು ಬರಮಾಡಿಕೊಂಡು, ಆದರದ ಮಾತುಗಳನ್ನಾಡಿಯಾಯಿತು. ರಾಮಾನು ಜರೂ ಯಾದವನ ಇತರ ಶಿಷ್ಯರೊಡನೆ ಯಾತ್ರೆಗೆ ಹೊರಟರು. ಹೋಗುತ್ತ ದಾರಿಯಲ್ಲಿ ವಿಂಧ್ಯಾಟವಿಯಲ್ಲಿ ಒಮ್ಮೆ ರಾಮಾನುಜರು ಏಕೋ ಕೊಂಚ

ಹಿಂದುಳಿದಾಗ, ಗೋವಿಂದ ತಾನೂ ಹಿಂದುಳಿದು ರಹಸ್ಯವಾಗಿ ತಂತ್ರವೆಲ್ಲ ವನ್ನೂ ಹೇಳಿ ರಾಮಾನುಜರು ತಪ್ಪಿಸಿಕೊಂಡು ಹೋಗಿಬಿಡಬೇಕೆಂದು ಒತ್ತಾಯಪಡಿಸಲು, ರಾಮಾನುಜರು ಅಂತೆಯೇ ಕಾಡುಮೇಡಿನತ್ತ ಹೊರಟು ಎಲ್ಲೆಲ್ಲೋ ಅಲೆದರು. ಅಲೆದಲೆದು ಬೇರೊಂದು ದಾರಿಯೂ ಮುಂದೆ ಕಾಣ ದಾದಾಗ, ಮಧ್ಯಾಹ್ನದ ಬಿಸಿಲಿನಲ್ಲಿ ಬೆಂದು ಶ್ರಾಂತರಾದಾಗ, ಕಿರಾತ ದಂಪತಿ ಗಳು ತಮ್ಮ ಕಡೆ ಬರುವುದನ್ನು ಕಂಡರು. ಕಂಡು ಅವರನ್ನು ಕುಶಲಪ್ರಶ್ನೆ ಕೇಳಿದಾಗ ಅವರು ತಾವು ಸಿದ್ಧಾಶ್ರಮದಿಂದ ಸತ್ಯವ್ರತಕ್ಷೇತ್ರದ ಕಡೆ ಹೊರಟಿ ವರೆಂದಾಗ, ರಾಮಾನುಜರು ತಾವೂ ಅವರನ್ನು ಹಿಂಬಾಲಿಸುವರೆಂದು ಬೇಡಿ ಅವರೊಡನೆ ನಡೆದರು. ಸಂಜೆ ಇರುಳಾಯಿತು; ಮರದಡಿಯಲ್ಲಿ ಇರುಳ ಕಳೆದಾಯಿತು. ಇನ್ನೇನು ಬೆಳಗಾಗುವುದೆನ್ನುವಾಗ ಕಿರಾತನ ಹೆಂಡತಿ "ದಾಹ ಬಹಳ, ನೀರಿಷ್ಟು ತರಬಾರದೇ" ಎಂದು ತನ್ನಿನಿಯನನ್ನು ಕೇಳಿದಾಗ, ಆತ "ಬೆಳಗಾಗಲಿ, ತರುವೆ" ನೆಂದುದನ್ನು ಕೇಳಿ ರಾಮಾನುಜರು "ಅಯ್ಯೋ, ಆಕೆಯ ಕಷ್ಟವೆಷ್ಟೋ, ನಾನಾದರೂ ಇವರ ಸೇವೆಯಿಷ್ಟು ಮಾಡಲಾರೆನೆ" ಎನ್ನುತ್ತ ನೀರನ್ನರಸುತ್ತ ನಡೆದು, ನೀರನ್ನು ಸಂಪಾದಿಸಿ ತಿರುಗಿ ಮರದಡಿ ಬಂದು ನೋಡಲು ಕಿರಾತ ದಂಪತಿಗಳು ಇಲ್ಲದುದನ್ನು ಕಂಡು ಬೆರಗಾಗಿ ಸುತ್ತ ನೋಡಲು ಆಗತಾನೇ ಬಂದ ತುಂಬು ಬೆಳಕಿನಲ್ಲಿ ಕೊಂಚ ದೂರದಲ್ಲೇ ಜನರು ಓಡಾಡುತ್ತಿರುವುದನ್ನು ಕಂಡು ಆಚ್ಚರಿಗೊಂಡರು. ದಾರಿಗಾಣದೆ ತೊಳಲಿದಾಗ, ತಮಗೆ ದಾರಿ ತೋರಬೇಕೆಂದು ಬಂದ ಕಿರಾತ ದಂಪತಿಗಳು ಸಾಕ್ಷಾತ್ ಲಕ್ಷ್ಮೀನಾರಾಯಣರೇ ಎಂದು ಮನಸ್ಸಿಗೆ ದೃಢವಾದಾಗ ಅವರ ಆನಂದ ಹೇಳತೀರದು; ಭಕ್ತನಿಗಾಗಿ ಭಗವಂತ ಬರುವ ಪರಿ ಬಲ್ಲವರಾರು? ಅಚ್ಚರಿಯಿಂದಲೂ, ಸಂತಸದ ಹೆಚ್ಚಳದಿಂದಲೂ ಮುಂದೆ ನಡೆದು, ಓಡಾಡು ತ್ತಿದ್ದ ಜನರನ್ನು "ಇದು ಯಾವ ಊರು" ಎಂದು ಕೇಳಿದಾಗ, ಅವರು "ಅಯ್ಯಾ, ಬ್ರಾಹ್ಮಣ, ಇದು ಕಾಂಚೀಪುರ. ಮುಂದೆ ಕಾಣುವುದೇ 'ಪುಣ್ಯ ಕೋಟಿ' ವಿಮಾನವೆಂದು ಪ್ರಸಿದ್ಧವಾದ ವರದರಾಜನ ದೇವಾಲಯದಗೋಪುರ" ಎಂದುದನ್ನು ಕೇಳಿ ಭಕ್ತಬಾಂಧವನಾದ ಭಗವಂತನನ್ನು ಮನಸ್ಸಿನಲ್ಲಿಯೇ ವಂದಿಸಿ ಕಾಂಚಿಗೆ ಬಂದು ಸೇರಿದರು. ಅಂದಿನಿಂದ ಯಾವ ಕೊಳದಿಂದ ನೀರನ್ನು ಕಿರಾತ ದಂಪತಿಗಳಿಗಾಗಿ ತರಲುಜ್ಜುಗಿಸಿದರೋ, ಆ 'ಶಾಲೈಕ್ಕಿಣರ್' ನಿಂದ

ವರದರಾಜನ ಅಭಿಷೇಕಕ್ಕಾಗಿ ನಿತ್ಯವೂ ನೀರನ್ನು ತರುವ ಕೈಂಕರ್ಯದಲ್ಲಿ ನಿರತರಾದರು.

ಇತ್ತ ಯಾದವಪ್ರಕಾಶನು ರಾಮಾನುಜರನ್ನು ಕಾಣದೆ ಕೊಂಚ ಹೊತ್ತು ತಡೆದು ನಿಂತು ಕಾದು ರಾಮಾನುಜರು ಬಾರದಿರಲು, ಅವರಿಗೆ ತಾನಾಗಿಯೇ ವಿಂಧ್ಯಾಟವಿಯಲ್ಲಿ ಎಲ್ಲೋ ಲುಪ್ತರಾಗುವಂತಾಯಿತೆಂದು ಮನಸ್ಸಿನಲ್ಲಿ ಸಮಾಧಾನವಾದರೂ, ಮೇಲೆ ಮಾತ್ರ ಬಹು ವಿಷಾದವನ್ನು ಹೊರಗೆಡಹಿ ಕಾಶಿಯ ಯಾತ್ರೆಯನ್ನು ಮುಂದುವರಿಸಿದನು. ಅಲ್ಲಿ ಗಂಗೆಯಲ್ಲಿ ಸ್ನಾನ ಮಾಡುತ್ತಿದ್ದಾಗ ಗೋವಿಂದನ ಕೈಗೆ ಶಿವಲಿಂಗ ಒಂದು ತೇಲಿ ಬಂದು ಸೇರಿಕೊಳ್ಳಲು, ಯಾದವನು ಆತನನ್ನು ಬಹಳ ಹೊಗಳಿ ಶಿವದೀಕ್ಷೆಯನ್ನಿತ್ತು "ಉಳ್ಳಂಗೈ ಕೊಣರ್‌ನ್ದ ನಾಯನಾರ್" (ಅಂಗೈಯಲ್ಲಿ ತಂದ ಮಹಾನುಭಾವ) ಎಂದು ಹೆಸರಿಟ್ಟನು. ಅಂದಿನಿಂದ ಗೋವಿಂದ ಮಹಾ ಶಿವಭಕ್ತನಾಗಿ, ಮಳಲೈ ಮಂಗಲದಲ್ಲಿ ಶಿವಲಿಂಗವನ್ನು ಸ್ಥಾಪಿಸಿ, ಅನಂತರ ಕಾಲಹಸ್ತಿಯ ಮಹಾಜನರ ಕೋರಿಕೆಯಂತೆ ಅಲ್ಲಿನ ದೇವಾಲಯವನ್ನು ವ್ಯವಸ್ಥೆಗೊಳಿಸುವ ಕಾರ್ಯ ಕೈಕೊಂಡನು. ಯಾದವನೂ ಕಂಚಿಗೆ ಹಿಂದಿರುಗಿ ಬಂದ ಮೇಲೆ, ಅಲ್ಲಿ ರಾಮಾನುಜರಿರುವುದನ್ನು ಕಂಡು ಭಯಾಶ್ಚರ್ಯಗಳೊಡನೆ ಅವರನ್ನು ಬರಮಾಡಿಕೊಂಡು ಮತ್ತೆ ಪಾಠ ಮುಂದುವರಿಸಬಹುದೆಂದನು.

ಈ ಎಲ್ಲ ಸಂಗತಿ ಶ್ರೀರಂಗದಲ್ಲಿ ಶ್ರೀವೈಷ್ಣವರಿಗಾಧಾರವಾದ ಯಾಮುನಾಚಾರ್ಯರಿಗೆ ತಿಳಿಯಲು ಅವರು ರಾಮಾನುಜರನ್ನು ಕಾಣಬೇಕೆಂಬ ತವಕದಿಂದ ಕಂಚಿಗೊಮ್ಮೆ ಬಂದರು. ಬಂದವರೇ ವರದರಾಜಸನ್ನಿಧಿಯಲ್ಲಿ ಪೂಜೆ ನಡೆಯುತ್ತಿರುವಾಗ, ದೂರದಿಂದ ಶಿಷ್ಯಪರಿವೃತನಾದ ಯಾದವನಕಡೆ ನೋಡಿ ಹತ್ತಿರವಿದ್ದವರನ್ನು " ಆ ಶಿಷ್ಯರಲ್ಲಿ ರಾಮಾನುಜರಾರು ? " ಎಂದು ಕೇಳಿ, " ಆಜಾನುಬಾಹು, ಉನ್ನತ ವಿಶಾಲನೂ ಜ್ಯೋತಿರ್ಮಯನೂ ಆದ ಆತ " ನೆಂದು ಕೇಳಿ ಕಣ್ದಣಿಯ ನೋಡಿ, " ರಾಮಾನುಜನನ್ನು ಶ್ರೀವೈಷ್ಣವ ಸಂಪ್ರದಾಯ ದೀಪಕನನ್ನಾಗಿ ನಮಗನುಗ್ರಹಿಸು " ಎಂದು ವರದರಾಜನನ್ನು ಪ್ರಾರ್ಥಿಸಿದರು. ಇಷ್ಟರಲ್ಲೇ ಶ್ರೀರಂಗಕ್ಕೆ ಒಡನೆಯೇ ಹೋಗಬೇಕಾದ ಕೆಲಸ ಒದಗಿದುದರಿಂದ, ಯಾಮುನಾಚಾರ್ಯರು ಹೊರಟುಬಿಡಬೇಕಾಯಿತು.

ಆದರೆ, ಶ್ರೀವೈಷ್ಣವ ಸಂಪ್ರದಾಯ ಸಿದ್ಧಾಂತಗಳ ಪ್ರವರ್ತನೆಗೆ ರಾಮಾನುಜ ನನ್ನು ಎಂದು ಹೊಂದಿಯೇನೋ ಎಂದೇ ಪ್ರತೀಕ್ಷಿಸುತ್ತಲಿದ್ದರು.

ಯಾದವನ ಬಳಿ ಎಂದಿನಂತೆ ವೇದಾಂತ ವ್ಯಾಸಂಗ ನಡೆದುಬರುತ್ತಿರಲು ಒಮ್ಮೆ ಅಲ್ಲಿನ ಅರಸನಾದ ವೀರರಾಜೇಂದ್ರಚೋಳನ ಮಗಳಿಗೆ ಬ್ರಹ್ಮರಾಕ್ಷಸ ನೊಬ್ಬನಿಂದ ತೊಂದರೆಯಾಗುತ್ತಿದ್ದುದರಿಂದ ಯಾದವನಿಗೆ ಕರೆ ಬಂದಿತು. ಯಾದವ ಮಂತ್ರತಂತ್ರಗಳೆಷ್ಟನ್ನುಪಯೋಗಿಸಿದರೂ, ಬ್ರಹ್ಮರಾಕ್ಷಸ ರಾಜ ಕುಮಾರಿಯನ್ನು ಬಿಟ್ಟುಹೋಗದೆ, ಮತ್ತೆ ಮತ್ತೆ ಯಾದವನನ್ನು ಹೀಯಾ ಳಿಸಿ ಗಹಗಹಿಸಿ ನಗತೊಡಗಿತು. ಬ್ರಹ್ಮರಾಕ್ಷಸನೇ ಕೊನೆಗೆ " ನಿಮ್ಮ ಶಿಷ್ಯ ರಾದ ರಾಮಾನುಜರು ತಮ್ಮ ತಿರುವಡಿಗಳನ್ನು ಈ ರಾಜಪುತ್ರಿಯ ತಲೆಯ ಮೇಲಿರಿಸಿದರೆ ನಾನು ಬಿಡುತ್ತೇನೆ " ಎಂದು ಹೇಳಿದುದರ ಮೇಲೆ ಶ್ರೀ ರಾಮಾ ನುಜರು ಅಂತೆಯೇ ಮಾಡಿ ರಾಜಕುಮಾರಿಯ ಕಷ್ಟವನ್ನು ಕಳೆದರು. ಇದ ರಿಂದ ಗುರು ಶಿಷ್ಯರ ಪ್ರಥೆ ಯಾದವನೆಣಿಕೆಗೆ ವಿರುದ್ಧವಾಗಿ ತಲೆಕೆಳಗಾಯಿತು. ಮುಂದೆ ಒಂದು ಸಲ ಉಪನಿಷತ್ತಿನ ಪ್ರವಚನ ನಡೆದಾಗ ' ಸರ್ವಂ ಖಲ್ವಿದಂ ಬ್ರಹ್ಮ ' ಮತ್ತು ' ನೇಹ ನಾನಾಸ್ತಿ ಕಿಂಚನ ' ಎಂಬ ವಾಕ್ಯಗಳ ಬಗ್ಗೆ ಗುರು ಶಿಷ್ಯರಿಗೆ ವಾಗ್ವಾದ ನಡೆದು, ಅಂದು ಶಿಷ್ಯ ಯಾದವನ ಶಾಲೆಯನ್ನು ಪೂರ್ಣ ವಾಗಿ ಬಿಟ್ಟುಬಿಡಬೇಕಾಯಿತು. ಮತ್ತೆ ಕಾಂಚೀಪೂರ್ಣರ ಸಲಹೆಯಂತೆ ವರದರಾಜನ ತಿರುಮಂಜನ (ಅಭಿಷೇಕ) ಕೈಂಕರ್ಯವನ್ನು ಕೈಗೊಂಡರು.

ಇತ್ತ ಶ್ರೀರಂಗದಲ್ಲಿ ಯಾಮುನಾಚಾರ್ಯರು ತಮ್ಮ ಅಂತ್ಯ ಸಮೀಪಿಸಿದು ದನ್ನು ಕಂಡುಕೊಂಡರು ; ಶರೀರದ ಸ್ಥಿತಿಯೂ ಕೆಟ್ಟಿತು. ಆಗ ತಮ್ಮ ಶಿಷ್ಯ ರಾದ ತಿರುವರಂಗಪ್ಪೆರುಮಾಳ್ ಅರೈಯಾರ್ ಎಂಬುವರಲ್ಲಿ ಶಿಷ್ಯರನ್ನೆಲ್ಲ ಒಪ್ಪಿಸಿ ಯಾದವನಿಂದ ಬೇರೆಬಂದ ರಾಮಾನುಜರನ್ನು ಕರೆತರಲು ಮಹಾಪೂರ್ಣ ರನ್ನು ಕಂಚಿಗೆ ಕಳುಹಿಸಿದರು. ಮಹಾಪೂರ್ಣರು ಕಂಚಿಗೆ ಬಂದು ಅಲ್ಲಿ ವರದ ರಾಜನನ್ನು ಸೇವಿಸುತ್ತ ಹಾಡಿದ

" ಸ್ವಾಭಾವಿಕಾನವಧಿಕಾತಿಶಯೇಶಿತೃತ್ವಂ ನಾರಾಯಣ
ತ್ವಯಿ ನ ಮೃಷ್ಯತಿ ವೈದಿಕಃಕಃ ।
ಬ್ರಹ್ಮಾ ಶಿವಶ್ಶತಮುಖಃ ಪರಮಸ್ಸ್ವರಾಡಿತ್ಯೇತೇಽಪಿ
ಯಸ್ಯ ಮಹಿಮಾರ್ಣವವಿಪ್ರುಷಸ್ತೇ ॥ "

ಎಂಬುದನ್ನು ಕೇಳಿ ರಾಮಾನುಜರು "ಇದನ್ನು ರಚಿಸಿದವರಾರು" ಎಂದು ಮಹಾಪೂರ್ಣರನ್ನು ಕೇಳಲು, "ಆಳವಂದಾರ್ ಎಂಬ ಶ್ರೀ ಯಾಮುನಾಚಾರ್ಯರು" ಎನ್ನಲು, ರಾಮಾನುಜರಿಗೆ ಯಾಮುನಾಚಾರ್ಯರನ್ನು ಸಂದರ್ಶಿಸಬೇಕೆಂಬ ಕುತೂಹಲ ಬಹಳವಾಗಿ ಮಹಾಪೂರ್ಣರೊಡನೆ ಶ್ರೀರಂಗಕ್ಕೆ ಹೊರಟರು. ಶ್ರೀರಂಗದ ಹೊರಗೇ ಜನಸಂದಣಿಯೂ, ಮಹತ್ತಾದ ನಿರಾಶೆಯ ಭಾವವೂ ಕಾಣಲು, ವಿಚಾರ ಮಾಡಲಾಗಿ ಯಾಮುನರು ಪರಮಪದವನ್ನು ಹೊಂದಿದರೆಂದು ತಿಳಿದು ರಾಮಾನುಜರ ಹೃದಯ ಬಿರಿಯಿತು. ಮಹಾಪೂರ್ಣರು ಅವರನ್ನು ಸಂತೈಸಿ, ಯಾಮುನರ ಕಳೇಬರವಿದ್ದೆಡೆ ಕರೆದೊಯ್ದು ಸಂದರ್ಶನ ಮಾಡಿಸಿದಾಗ, ಯಾಮುನರ ಬಲಗೈಯಲ್ಲಿ ಮೂರು ಬೆರಳುಗಳು ಮಾತ್ರ ಮಡಿಸಿದ್ದುದನ್ನು ಕಂಡು ಶಿಷ್ಯರನ್ನು ಕರೆದು "ಇದೇನು ಸೋಜಿಗ, ಮೂರು ಬೆರಳುಗಳು ಮಡಿಸಿಕೊಂಡಿವೆಯಲ್ಲ, ಕೊನೆಗಾಲದಲ್ಲಿ ಆಳವಂದಾರರ ಇಚ್ಛೆಯಿದ್ದಿತಾದರೂ ಏನು ?" ಎನ್ನಲು, ಶಿಷ್ಯರು "ನಾವು ಆ ಬಗ್ಗೆ ನಿರ್ಧರವಾಗಿ ಏನೂ ಹೇಳಲಾರೆವು ; ಆದರೂ ಗುರುಗಳು ಮೇಲಿಂದ ಮೇಲೆ ಮೂರು ವಿಷಯಗಳನ್ನು ಹೇಳಿದ್ದರು; ಒಂದು, ವ್ಯಾಸಪರಾಶರರ ಬಗ್ಗೆ ನಮ್ಮ ಕೃತಜ್ಞತೆಯ ಕಾಣಿಕೆಯನ್ನು ಸಲಿಸುವುದು, ಎರಡನೆಯದಾಗಿ ನಮ್ಮಾಳ್ವಾರರಿಗೆ ನಮ್ಮ ಭಕ್ತಿಯ ಕಾಣಿಕೆಯನ್ನು ಅರ್ಪಿಸುವುದು, ಮೂರನೆಯದು ವಿಶಿಷ್ಟಾದ್ವೈತ ಸಂಪ್ರದಾಯದ ರೀತಿಯಿಂದ ಬ್ರಹ್ಮಸೂತ್ರಕ್ಕೆ ಭಾಷ್ಯ ಬರೆಯುವುದು" ಎಂದು ಹೇಳಿದರು. ಒಡನೆಯೇ ರಾಮಾನುಜರು ಯಾಮುನರ ಶರೀರದತ್ತ ತಿರುಗಿ, "ಭಗವನ್, ತಮ್ಮ ಈ ಮೂರು ಅಭೀಷ್ಟಗಳ ಸಾಧನೆಗಾಗಿ ಇದೋ ನಾನು ಬದ್ಧಕಂಕಣನಾಗುತ್ತೇನೆ" ಎನ್ನಲು, ಮಡಿಸಿದ್ದ ಮೂರು ಬೆರಳುಗಳು ತೆರಮವಂತೆ. ರಾಮಾನುಜರು ಅಂತು ಅಂದು ಯಾಮುನರ ಆಜ್ಞೆಯನ್ನು ಶಿರಸಾವಹಿಸಿದರು; ಪರಂಪರೆಯಾ ಯಾಮುನರ ಶಿಷ್ಯತ್ವವು ರಾಮಾನುಜರಿಗೆ ಬಂದಿತಾದರೂ, ಈ ಒಂದು ಸನ್ನಿವೇಶದಿಂದ ಸಾಕ್ಷಾಚ್ಛಿಷ್ಯತ್ವ ಲಭಿಸಿತು. ಯಾಮುನರ ಅಂತ್ಯ ಸಂಸ್ಕಾರಗಳು ಯಥಾವಿಧಿಯಾಗಿ ನಡೆದ ಮೇಲೆ, ರಾಮಾನುಜರು ಕಾಂಚೀಪುರಕ್ಕೆ ಬಂದು ಅಲ್ಲಿ ವರದರಾಜನ ಸೇವೆಗೆ ನಿಂತರು; ವರದರಾಜನ ಅಂತರಂಗಭಕ್ತರಾದ ಕಾಂಚೀಪೂರ್ಣರಲ್ಲಿ ತುಂಬ ಭಕ್ತಿಯೂ ಉಂಟಾಯಿತು. ಕಾಂಚೀಪೂರ್ಣರನ್ನು ಗುರುವಾಗಿ ಆಶ್ರಯಿಸಲು

ರಾಮಾನುಜರು ಅವರನ್ನು ಬೇಡಲು ವೈಶ್ಯರಾದ ಅವರು "ಆಧ್ಯಾತ್ಮಿಕದಲ್ಲಿ ವರ್ಣಾಶ್ರಮ ವ್ಯವಸ್ಥೆಯನ್ನು ತಳ್ಳಬಹುದಾದರೂ, ಸಮಾಜ ಸಮರಸವಾಗಿ ಉಳಿಯಬೇಕಾದರೆ ಈ ವ್ಯವಸ್ಥೆಯನ್ನು ಕಾಪಾಡಬೇಕಾಗಿದೆ" ಯೆಂದು ಹೇಳಿದಾಗ, ರಾಮಾನುಜರು ಇನ್ನಾವುದಾದರೂ ರೀತಿಯಿಂದ ಕಾಂಚಿಪೂರ್ಣರ ಪ್ರಸಾದವನ್ನು ಸ್ವೀಕರಿಸಬೇಕೆಂದು ಬಗೆದರು. ಯೋಚಿಸಿ ಕಾಂಚೀಪೂರ್ಣರನ್ನು ಊಟಕ್ಕೆ ಕರೆದು, ಉಳಿದ ಶೇಷವನ್ನು ಸ್ವೀಕರಿಸುವುದೆಂದುಕೊಂಡು ಸಂತೋಷ ಹೊಂದಿದರು. ಆದರೆ, ರಾಮಾನುಜರು ಮನೆಯಲ್ಲಿಲ್ಲದ ವೇಳೆ, ಕಾಂಚೀಪೂರ್ಣರು ಬಂದು ಊಟಮಾಡಿ ಹೊರಟುಹೋದರು. ಕೀಳ್ಜಾತಿಯ ಮನುಷ್ಯನು ಊಟಮಾಡಿದುದರಿಂದ, ರಾಮಾನುಜರ ಹೆಂಡತಿ ಆ ಸ್ಥಳವನ್ನು ಶುದ್ಧಿಮಾಡಿ ತಾನೂ ಸ್ನಾನ ಮಾಡಿ, ರಾಮಾನುಜರು ಬಂದೊಡನೆ ನಡೆದುದೆಲ್ಲವನ್ನೂ ತಿಳಿಸಲು, ರಾಮಾನುಜರಿಗೆ ಗುರುಪ್ರಸಾದ ದೊರಕದ ಬಗ್ಗೆ ಮನಸ್ಸಿಗೆ ಬಹಳ ಸಂಕಟವಾಗಿ ತಮ್ಮ ಪತ್ನಿಯ ಮೇಲೆ ಕುಪಿತರಾದರು. ಆದರೇನು? ಸಂದೇಹಗಳಿದ್ದುವು ಇದ್ದಂತೆಯೇ ಉಳಿಯಲು 'ದೇವರ ಇಚ್ಛೆ ವರ್ಣವ್ಯವಸ್ಥೆ ನಡೆದು ಬರಬೇಕೆಂಬುದೇನೋ' ಎಂದು ಸಮಾಧಾನ ತಂದುಕೊಂಡು ಮತ್ತೆ ಕಾಂಚೀಪೂರ್ಣರ ಬಳಿ ಬಂದು "ನನ್ನ ಮನಸ್ಸಿನಲ್ಲಿ ಕೆಲವು ಸಂಶಯಗಳಿವೆ. ವರದರಾಜನ ಮುಂದೆ ಅವನ್ನಿಟ್ಟು ನಿವಾರಿಸಲಾರಿರಾ?" ಎಂದು ಪ್ರಾರ್ಥಿಸಿದರು. ಕಾಂಚೀಪೂರ್ಣರು "ಆಗಲಿ" ಎಂದರು. ಅಂದು ರಾತ್ರಿ ಪೂಜೆ ಮುಗಿದ ಮೇಲೆ, ವರದರಾಜ ಕಾಂಚೀಪೂರ್ಣರಿಗೆ "ರಾಮಾನುಜನ ಸಂಶಯಗಳು ನನಗೆ ತಿಳಿದಿವೆ. ಈ ಆರು ಉತ್ತರಗಳನ್ನು ಆತನಿಗೆ ತಲಪಿಸು. ೧. ನಾನೇ ಪರತತ್ವ. ೨. ಜೀವನು ನನ್ನಿಂದ ಭಿನ್ನ. ೩. ಪ್ರಪತ್ತಿಯೇ ಮೋಕ್ಷೋಪಾಯ. ೪. ಕೊನೆಗಾಲದಲ್ಲಿ ನನ್ನ ಸ್ಮರಣೆ ಬೇಕೆಂಬ ನಿರ್ಬಂಧವಿಲ್ಲ. ೫. ದೇಹಾವಸಾನವಾದ ಮೇಲೆ ಮುಕ್ತಿ. ೬. ಮಹಾಪೂರ್ಣರನ್ನು ಗುರುವಾಗಿ ಆಶ್ರಯಿಸು, ಎಂದು ತಿಳಿಸು" ಎಂಬುದಾಗಿ ಆಜ್ಞೆಯಿತ್ತನು. ಕಾಂಚೀಪೂರ್ಣರು ಅದನ್ನು ರಾಮಾನುಜರಿಗೆ ತಿಳಿಸಲು, ಸ್ವತಃ ವರದರಾಜನಿಂದ ಉಪದೇಶ ಹೊಂದಿದ ರಾಮಾನುಜರು ಬಹು ಆನಂದ ಹೊಂದಿದರು. ಮಹಾಪೂರ್ಣರನ್ನು ಕಾಣಬೇಕೆಂದು ಶ್ರೀರಂಗಕ್ಕೆ ಹೊರಟರು. ಮಹಾಪೂರ್ಣರೂ ರಾಮಾನುಜರನ್ನು ಕರೆತರಬೇಕೆಂದು ಶ್ರೀರಂಗದಿಂದ

ಹೊರಟಿದ್ದರು. ಇಬ್ಬರೂ ಮಧುರಾಂತಕದಲ್ಲಿ ಒಬ್ಬರನ್ನೊಬ್ಬರು ಕಂಡ ಮೇಲೆ, ರಾಮಾನುಜರು ಪೂರ್ಣರನ್ನು ಪಂಚಸಂಸ್ಕಾರಗಳ ಅನುಗ್ರಹಕ್ಕಾಗಿ ಬೇಡಿದರು. ಮಧುರಾಂತಕದ ಕೋದಂಡರಾಮಸ್ವಾಮಿಯ ಸನ್ನಿಧಿಯಲ್ಲಿ ಸುದರ್ಶನಹೋಮ, ಪಂಚಸಂಸ್ಕಾರ, ದ್ವಯೋಪದೇಶಗಳು ನೆರವೇರಿದುವು. ಮರುದಿನ ಇಬ್ಬರೂ ಕಂಚಿಗೆ ಬಂದರು.

ಕಂಚಿಯಲ್ಲಿ ರಾಮಾನುಜರ ಮನೆಯಲ್ಲಿ ಒಂದು ಭಾಗದಲ್ಲೇ ಮಹಾಪೂರ್ಣರೂ ಸಂಸಾರ ಮಾಡುವ ವ್ಯವಸ್ಥೆ ನಡೆದು, ಶ್ರೀವೈಷ್ಣವ ಗ್ರಂಥಗಳ ಪಾಠಪ್ರವಚನಗಳು ಸಾಂಗವಾಗಿ ನಡೆದುವು.

ಒಮ್ಮೆ ತಮಗೆ ಎಣ್ಣೆಯೊತ್ತುತ್ತಿದ್ದ ಹುಡುಗನಿಗೆ ಹಸಿವೆಯಾಗಿರಲು, ರಾಮಾನುಜರು ಹೆಂಡತಿಯನ್ನು ಕರೆದು ತಂಗಳೇನಾದರೂ ಮಿಕ್ಕಿದೆಯೇ ಎಂದು ಕೇಳಿದುದಕ್ಕೆ ಆಕೆ, ಅವನ್ನೆಲ್ಲಾ ತಂದುಕೊಟ್ಟು ಮಾಡಲು ಏನೋ ಬೇಸರಗೊಂಡು " ಇಲ್ಲ " ಎಂದಾಗ, ರಾಮಾನುಜರು ನಂಬದೆ ಒಳಗೆ ಹೋಗಿ ತಪ್ಪಲೆಯಲ್ಲಿ ಅನ್ನವಿರುವುದನ್ನು ಕಂಡು ಹುಡುಗನಿಗೆ ಎಲ್ಲವನ್ನೂ ಕೊಟ್ಟು "ಹಸಿದು ಬೇಡಿದರೆ ಇಲ್ಲವೆಂದು ಹುಸಿ ನುಡಿಯುವುದೇ ? ಹಸಿದವನಿಗೆ ಅಶನ ಕೊಡದಿರುವುದಕ್ಕಿಂತ ಹೀನವಾದ ಕೆಲಸ ಉಂಟೆ ? ಸುಳ್ಳು—ಸುಳ್ಳೊಡನೆ ನೀಚತನ " ಎಂದು ರೇಗಿ ತುಂಬ ಸಂಕಟಗೊಂಡರು. ಇನ್ನೊಮ್ಮೆ ರಾಮಾನುಜರ ಹೆಂಡತಿಯೂ ಮಹಾಪೂರ್ಣರ ಹೆಂಡತಿಯೂ ನೀರಿಗಾಗಿ ಬಾವಿಗೆ ಹೋಗಿದ್ದಾಗ, ಒಬ್ಬರ ಕೊಡದ ನೀರು ಮತ್ತೊಬ್ಬರಿಗೆ ಸಿಡಿಯಿತೆಂಬುದರ ಬಗ್ಗೆ ದೊಡ್ಡ ಜಗಳವೇ ಆರಂಭವಾಗಿ ಆಣೆಯಿಡುವ ತನಕ ಹೊರಟು ಹೋಯಿತು. ಇದನ್ನು ಕಂಡ ಮಹಾಪೂರ್ಣರು ಹೆಂಡತಿಯನ್ನು ದಂಡಿಸಿ, ಮುಂದೆ ಅಲ್ಲಿರುವುದು ಸರಿಯಲ್ಲವೆಂದು ಶ್ರೀರಂಗಕ್ಕೆ ಹೊರಟುಬಂದರು. ಮನೆಗೆ ಬಂದ ರಾಮಾನುಜರಿಗೆ ಇದೆಲ್ಲ ತಿಳಿಯಲು, ಕೋಪ ಮೀರಿ ಮೀರಿ ಶೋಕವಾಗಿ ಹೃದಯ ಕುಗ್ಗಿ ಸಂಸಾರದ ಬಗ್ಗೆ ತಿರಸ್ಕಾರ ಸಂಪೂರ್ಣವಾಗಿ, ತಮ್ಮ ಹೆಂಡತಿಗೆ ಮನೆಯಲ್ಲಿದ್ದುದನ್ನೆಲ್ಲಾ ತೆಗೆದುಕೊಟ್ಟು ತಾವು ಸನ್ಯಾಸ ತೆಗೆದುಕೊಳ್ಳುವ ನಿಶ್ಚಯವನ್ನು ತಿಳಿಯಹೇಳಿ ತವರೂರಿಗೆ ಕಳಿಸಿದರು. ಮರುದಿನ ವರದರಾಜನ ಬಳಿ ನಿಂತು ಗದ್ಗದ ಕಂಠದಿಂದ " ಸನ್ಯಾಸಹೊಂದಲು ಇಲ್ಲಿ ಯಾರೂ ಇಲ್ಲವಲ್ಲ. ವರದರಾಜ, ನೀನೇ ಅನುಗ್ರಹಿಸು" ಎಂದು ಬೇಡಲು,

ವರದರಾಜನು ಕಾಂಚೀಪೂರ್ಣರ ಮೂಲಕ "ರಾಮಾನುಜ ತ್ರಿದಂಡಧಾರಿಯಾಗಿ ಕಾಷಾಯವನ್ನುಟ್ಟು ಸೇವೆಗೆ ಬರಲಿ" ಎಂದು ಅನುಗ್ರಹಿಸಿದನು. ರಾಮಾನುಜರು ರಾಮಾನುಜಮುನಿಯಾಗಿ ವರದರಾಜನಿಂದಲೇ ಸನ್ಯಾಸವನ್ನು ಹೊಂದಿ 'ಯತಿರಾಜ' ನೆಂಬ ಬಿರುದನ್ನೂ ಹೊಂದಿದರು.

ಯತಿಯಾಗಿ ಇನ್ನು ಯಾಮುನಾಚಾರ್ಯರ ಆಜ್ಞೆಗಳನ್ನು ನೆರವೇರಿಸುವ ಅವಕಾಶ ಒದಗಿತಾದರೂ ಕೆಲಸ ದೊಡ್ಡದಾದುದರಿಂದ, ಜತೆಗಾರರನ್ನಾರಿಸಬೇಕಾಯಿತು. ಮೊಟ್ಟಮೊದಲಿಗರಾಗಿ 'ಕೂರಂ' ಎಂಬ ಗ್ರಾಮದ ಒಡೆಯ ಕೂರೇಶ ತನ್ನ ಸಿರಿಯೆಲ್ಲವನ್ನೂ ತ್ಯಾಗಮಾಡಿ, ರಾಮಾನುಜರ ಬಳಿ ಬಂದು ಶಿಷ್ಯನಾದ; ರಾಮಾನುಜರ ಸೋದರಳಿಯ ದಾಶರಥಿ ಯತಿರಾಜನ ಸೇವೆಗೆ ಬಂದು ನಿಂತ. ಒಮ್ಮೆ ಯಾದವ ಪ್ರಕಾಶನ ತಾಯಿ ರಾಮಾನುಜರ ಮಹಿಮೆಯನ್ನು ಕಂಡು, ತನ್ನ ಮಗನನ್ನು ಶ್ರೀವೈಷ್ಣವನಾದರೆ ಶ್ರೇಯಸ್ಕರವೆಂದು ಹೇಳಿಕೊಂಡು ದೇವಾಲಯದ ಮೆಟ್ಟಿಲುಗಳನ್ನೇರುತ್ತಿದ್ದಾಗ ಯಾರೋ "ಒಳ್ಳೆಯದು" ಎನ್ನಲು ಆಕೆ ಮಗನೊಡನೆ ಎಲ್ಲವನ್ನೂ ಹೇಳಿದಳು. ಯಾದವನೂ ಅದಕ್ಕೆ ಒಪ್ಪಿಗೆ ಇತ್ತ. ಶಿಖಾಯಜ್ಞೋಪವೀತಗಳಿಲ್ಲದುದು ಮರಳಿ ಧರಿಸಬೇಕಾದರೆ ಭೂಪ್ರದಕ್ಷಿಣೆ ಮಾಡಬೇಕು. ಯಾದವಪ್ರಕಾಶ ಅಶಕ್ತ. ಇಂತು ಕಷ್ಟ ಸಂಭವಿಸಿತು. ಕನಸಿನಲ್ಲಿ ವರದರಾಜ ಬಂದು "ಭೂಪ್ರದಕ್ಷಿಣೆಯ ಅಗತ್ಯವಿಲ್ಲ. ಯತಿರಾಜನ ಪ್ರದಕ್ಷಿಣೆಯೊಂದಾದರೆ ಸಾಕು" ಎಂದು ಹೇಳಿದುದನ್ನು ಯಾದವ ನಂಬದೆ ಇರಲು, ಮಾರನೆಯ ದಿನ ಕಾಂಚೀಪೂರ್ಣರ ಮೂಲಕ ತಿರುಗಿ ವರದರಾಜನ ಅಪ್ಪಣೆಯಾಗಲು, ಹಾಗೆಯೇ ರಾಮಾನುಜರಿದ್ದಲ್ಲಿಗೆ ಬಂದು ಅವರನ್ನು ಪ್ರದಕ್ಷಿಣೆ ಮಾಡಿ ವಂದಿಸಿ ತ್ರಿದಂಡ ಸನ್ಯಾಸ ಕೊಡಬೇಕೆಂದು ಹಿಂದಿನ ಗುರು ಯಾದವ ಬೇಡಿದ. ರಾಮಾನುಜರೂ ತಟ್ಟನೆದ್ದು ಗುರುವಿಗೆ ವಂದಿಸಿ, ಆದರಿಸಿ, ಅನಂತರ ಸನ್ಯಾಸವನ್ನಿತ್ತು ಗೋವಿಂದಜೀಯರೆಂದು ಹೆಸರಿಟ್ಟು ಯತಿಗಳು ಆಚರಿಸಬೇಕಾದ ವಿಧಿಯನ್ನು ಚನ್ನಾಗಿ ವಿಚಾರಮಾಡಿ ಬರೆದಿಡಬೇಕೆಂದು ತಿಳಿಸಿದರು. ಹಾಗೆಯೇ ಗೋವಿಂದಜೀಯರೂ "ಯತಿಧರ್ಮ ಸಮುಚ್ಚಯ" ವೆಂಬ ಗ್ರಂಥವನ್ನು ಬರೆದು ಸಮರ್ಪಿಸಿ, ಕೆಲವು ಕಾಲವಿದ್ದು ಪರಮಪದವನ್ನು ಹೊಂದಿದರು.

ರಾಮಾನುಜ ಯತೀಂದ್ರರ ಖ್ಯಾತಿ ಶ್ರೀರಂಗಕ್ಕೆ ಹರಡಿದೊಡನೆಯೇ ಅಲ್ಲಿನವರೆಲ್ಲರೂ ಬಹಳ ಹರ್ಷದಿಂದ ಯಾಮುನಾಚಾರ್ಯರ ಸ್ಥಾನವನ್ನು ಅಲಂಕರಿಸಲು ರಾಮಾನುಜರನ್ನು ಕರೆತರಬೇಕೆಂದು ಯೋಚಿಸಿ ಕಾಂಚೀಪುರದ ವರದರಾಜನಿಂದ ರಾಮಾನುಜರನ್ನು ವರವಾಗಿ ಪಡೆಯಲೆಂದು ದೇವಗಾನ ನಿಪುಣರಾದ ತಿರುವರಂಗಪ್ಪೆರುಮಾಳ್ (ರಂಗನಾಥಗಾಯಕ) ಎಂಬುವರನ್ನು ಕಳುಹಿಸಿದರು. ವರದನ ಮುಂದೆ ಹಾಡಿ ಆತನನ್ನು ತಣಿಸಿದ ಗಾಯಕರು ವರದನಿತ್ತ ಮುತ್ತಿನ ಮಾಲೆಯನ್ನು ತೆಗೆದುಕೊಳ್ಳದೆ, ರಾಮಾನುಜರನ್ನೇ ವರವಾಗಿ ಬೇಡಿದರು. ವರದನೂ ಬೇರೆ ದಾರಿ ಕಾಣದೆ ರಾಮಾನುಜರನ್ನು ಕಳುಹಲೊಪ್ಪಿದನು. ದಾಶರಥಿಯೊಡನೆ ರಾಮಾನುಜರು ಶ್ರೀರಂಗಕ್ಕೆ ಹೊರಟರು; ಯಥಾಕಾಲದಲ್ಲಿ ಶ್ರೀರಂಗವನ್ನು ತಲಪಿ ರಂಗನಾಥನಿಂದ " ಉಡೈಯವರ್" (ಹೊಂದಿದವರು) ಎಂಬ ಹೆಸರನ್ನು ಹೊಂದಿದರು. ಶ್ರೀರಂಗದಲ್ಲಿ ನಿಂತು ಮಠವನ್ನು ಸ್ಥಾಪಿಸಿ, ರಂಗನಾಥನ ದೇವಾಲಯದ ಸೇವೆಯನ್ನು ವ್ಯವಸ್ಥೆಗೊಳಿಸಿದರು. ಇತ್ತ ಕಂಚಿಯಿಂದ ಕೂರಕ್ಕೆ ಹಿಂತಿರುಗಿದ ಕೂರೇಶನೂ ಕೆಲವು ದಿನಗಳಲ್ಲಿಯೇ ತನ್ನ ಹೆಂಡತಿ ಆಂಡಾಳಮ್ಮನೊಡನೆ ಯತಿಪತಿಯ ಸೇವೆಗೆ ನಿಂತನು. ಯತಿರಾಜನ ಮನಸ್ಸಿನಲ್ಲಿ ತನ್ನ ಸಹಪಾಠಿಯಾದ ಗೋವಿಂದನನ್ನು ಶ್ರೀವೈಷ್ಣವನನ್ನಾಗಿ ಮಾಡಬೇಕೆಂಬ ಉತ್ಕಟವಾದ ಅಭಿಲಾಷೆ; ಹಾಗೆ ಮಾಡಿದುದರಿಂದ ಮುಂದಿನ ಸಿದ್ಧಾಂತ ಪ್ರಚಾರ ಕಾರ್ಯಕ್ಕೆ ಆಗುವ ಅನುಕೂಲದ ಕಡೆ ದೃಷ್ಟಿ ಹೀಗಿದ್ದು, ಶ್ರೀಶೈಲಪೂರ್ಣರೆಂಬುವರನ್ನು ತಿರುಪತಿಗೆ ಕಳುಹಿಸಿ ಕಾಳಹಸ್ತಿಯಲ್ಲಿ ಗೋವಿಂದನನ್ನು ಕಂಡು ಮಾತನಾಡುವಂತೆ ಏರ್ಪಡಿಸಿದರು. ಶ್ರೀಶೈಲಪೂರ್ಣರ ಉಪದೇಶವನ್ನು ಹಲವುಬಾರಿ ಕೇಳಿ ಗೋವಿಂದನ ಮನಸ್ಸೂ ಒಂದು ರೀತಿಯಲ್ಲಿ ಶ್ರೀವೈಷ್ಣವ ಸಿದ್ಧಾಂತದ ಕಡೆ ಒಲಿಯುವಂತಿರುವಾಗ ಒಮ್ಮೆ ಇಬ್ಬರಿಗೂ ಒಗಟೆಗಳೆಂದು ತೋರುವ ಮಾತುಗಳಲ್ಲಿ ಚರ್ಚೆ ನಡೆದು, ಕೊನೆಗೊಂದು ದಿನ ಶ್ರೀಶೈಲಪೂರ್ಣರಿಂದ ಗೋವಿಂದ ಶ್ರೀವೈಷ್ಣವ ದೀಕ್ಷೆಯನ್ನು ಹೊಂದಿ, ಕಾಳಹಸ್ತಿಯನ್ನು ಬಿಟ್ಟು ಶ್ರೀರಂಗಕ್ಕೆ ಬಂದಾಗ ರಾಮಾನುಜರು ಆತನ ವಿನಯವನ್ನು ಕಂಡು ಬಹಳ ಸಂತೋಷಿಸಿ ತಮ್ಮ ಹೆಸರಾದ "ಎಂಬೆರುಮಾನಾರ್" ಎಂದು ಆತನನ್ನು ಕರೆದಾಗ, ಆತ

"ಹಾಗಾಗದು, ನಾನು ತಮ್ಮ ಪದಚ್ಛಾಯೆ ಮಾತ್ರ" ಎಂದು ಹೇಳಿ "ಎಂಬಾರ್" ಎಂಬಷ್ಟು ಮಾತ್ರ ಉಳಿಸಿಕೊಂಡನಂತೆ.

ಯಾಮುನಾಚಾರ್ಯರಿಂದ ಪರಮರಹಸ್ಯವಾದ ಮಂತ್ರಗಳ ಉಪದೇಶವನ್ನು ಪಡೆಯಬೇಕೆಂದು ಆಶಿಸಿದುದು ಸಾಧ್ಯವಾಗದಿರಲು, ರಾಮಾನುಜರು ಮಹಾಪೂರ್ಣರನ್ನಾಶ್ರಯಿಸಿ ದ್ವಯಮಂತ್ರವನ್ನು ಉಪದೇಶ ಹೊಂದಿ, ಅದರ ಮಹಿಮೆಯನ್ನರಿತರು. ಮಹಾಪೂರ್ಣರ ಸಲಹೆಯಂತೆ ತಿರುಕ್ಕೋಟ್ಟಿಯೂರಿನಲ್ಲಿ ವಾಸಿಸುತ್ತಿದ್ದ ಗೋಷ್ಠೀಪೂರ್ಣರು ಶ್ರೀರಂಗಕ್ಕೆ ಬಂದಿದ್ದಾಗ ತಿರುಮಂತ್ರೋಪದೇಶ ಕೊಡಬೇಕೆಂದು ಬೇಡಿದರು. ಗೋಷ್ಠಿಪೂರ್ಣರಾದರೂ ತಾವಿದ್ದಲ್ಲಿಗೆ ರಾಮಾನುಜರು ಬರಬೇಕೆಂದರು. ಅಂತೆಯೇ ತಿರುಕ್ಕೋಟ್ಟಿಯೂರಿಗೆ ರಾಮಾನುಜರು ಹೋಗಿ ವಂದಿಸಿದಾಗ, ಗೋಷ್ಠೀಪೂರ್ಣರು "ಇನ್ನೊಮ್ಮೆ ಬನ್ನಿ" ಎಂದರು. ರಾಮಾನುಜರು ಶ್ರೀರಂಗಕ್ಕೆ ಹಿಂತಿರುಗಿ, ಇನ್ನೊಮ್ಮೆ ತಿರುಕ್ಕೋಟ್ಟಿಯೂರಿಗೆ ಹೋಗಿ ಕೇಳಿದರು. ಗೋಷ್ಠೀಪೂರ್ಣರು "ಈಗ ಸಾಧ್ಯವಿಲ್ಲ, ಮತ್ತೆ ಬನ್ನಿ" ಎಂದರು. ಹೀಗೆ ಹದಿನೆಂಟು ಸಲ ತಿರುಕ್ಕೋಟ್ಟಿಯೂರಿನ ಯಾತ್ರೆ ನಡೆಯಿತು; ಕೊನೆಯ ಸಲ ಶ್ರೀರಂಗಕ್ಕೆ ಹಿಂದಿರುಗಿದಾಗ ರಾಮಾನುಜರ ಮನಸ್ಸಿನಲ್ಲಿ ತುಂಬಾ ದುಃಖವಾಯಿತು. ರಾಮಾನುಜರ ಶ್ರದ್ಧೆಯನ್ನೂ ಆಸಕ್ತಿಯನ್ನೂ ಪರೀಕ್ಷಿಸುತ್ತಿದ್ದ ಗೋಷ್ಠೀಪೂರ್ಣರು ಒಮ್ಮೆ ಇದ್ದಕ್ಕಿದ್ದಂತೆ, "ತ್ರಿದಂಡ ಪವಿತ್ರಗಳೊಡನೆ ರಾಮಾನುಜರು ಮಂತ್ರೋಪದೇಶಕ್ಕೆ ಬರಲಿ" ಎಂದು ಹೇಳಿಕಳುಹಿಸಿದರು. ಒಡನೆ ರಾಮಾನುಜರು ಕೂರೇಶದಾಶರಥಿಗಳೊಡನೆ ತಿರುಕ್ಕೋಟ್ಟಿಯೂರಿಗೆ ಬಂದು ಗೋಷ್ಠೀಪೂರ್ಣರನ್ನು ವಂದಿಸಿ ನಿಂತಾಗ, ಗೋಷ್ಠೀಪೂರ್ಣರು "ಇದೇನು ಇವರನ್ನು ಕರೆತಂದಿರಿ?" ಎಂದು ಕೇಳಿದರು. ಆಗ ರಾಮಾನುಜರು ದಾಶರಥಿಯನ್ನು ತೋರಿಸಿ "ಇದೋ, ಈತ ನನ್ನ ತ್ರಿದಂಡ," ಕೂರೇಶನನ್ನು ತೋರಿಸಿ "ನನ್ನ ಪವಿತ್ರ" ಎಂದಾಗ, ಗೋಷ್ಠೀಪೂರ್ಣರು ರಾಮಾನುಜರ ವಾತ್ಸಲ್ಯಾತಿಶಯವನ್ನು ಮೆಚ್ಚಿ, "ನಿನ್ನನ್ನೆಡೆಬಿಡದೆ ಇರುವ ಇವರ ವಿನಾ ಬೇರೊಬ್ಬರಿಗೂ ಈ ರಹಸ್ಯವನ್ನು ತಿಳಿಸಲಾಗದು" ಎಂದು ಕಟ್ಟಪ್ಪಣೆ ಮಾಡಿ ತಿರುಮಂತ್ರವನ್ನು ಉಪದೇಶಿಸಿದರು. ರಾಮಾನುಜರು ತಮ್ಮ ತ್ರಿದಂಡ ಪವಿತ್ರಗಳೊಡನೆ ಸ್ವೀಕರಿಸಿದರು. "ಪರಮ ಪವಿತ್ರವಾದ, ತಾರಕ

ವಾದ ತಿರುಮಂತ್ರ ಪಾಪಿಗಳಾದ ಪಾಮರರ ಉದ್ಧಾರಕ್ಕಲ್ಲದಿದ್ದರೆ ಮತ್ತೇಕೆ? ದೇವರು ದಯಾಮಯನೆಂದರೆ, ಆತನ ದಯೆ ಅವರಿಗೆ ಬೇಡವೆ? ಆತನ ದಿವ್ಯವಾಣಿ ಅವರಿಗೆ ಇಲ್ಲದಿದ್ದರೆ ವಾಣಿಯ ಸಾರ್ಥಕ್ಯವೆಂತು?" ಎಂದು ಮುಂತಾಗಿ ಆಲೋಚನೆಯ ತರಂಗಗಳು ಪರಮ ಕಾರುಣಿಕವೂ ವಾತ್ಸಲ್ಯ ಭರಿತವೂ ಆದ ಯತಿರಾಜ ಹೃದಯದಲ್ಲಿ ಏಳಲಾರಂಭಿಸಿರುವು. ಅಂತೆಯೇ ಮರುದಿನ ಲಕ್ಷ್ಮೀನೃಸಿಂಹನ ಬ್ರಹ್ಮೋತ್ಸವಕ್ಕೆ ಸೇರಿದ್ದ ಮಹಾಜನರೆಲ್ಲರನ್ನೂ ಒಟ್ಟು ಸೇರಿಸಿ ತಾವು ಸಂಪಾದಿಸಿದ ಈ ಅತ್ಯಮೂಲ್ಯವಾದ ಮಂತ್ರವನ್ನು ಸಾರಿದರು; ಸರ್ವರ ಮುಕ್ತಿಗೂ ಹೆದ್ದಾರಿ ತೋರಿದರು. ಈ ಸುದ್ದಿ ಗೋಷ್ಠೀಪೂರ್ಣರಿಗೆ ಮುಟ್ಟಿತು; ಅವರು ಕೋಪದಿಂದ ಕಿಡಿಕಿಡಿಯಾದರು. ಒಡನೆಯೇ ರಾಮಾನುಜರಿಗೆ ಬರಬೇಕೆಂದು ಅಜ್ಞೆಯಾಯಿತು. ರಾಮಾನುಜರು ಬಂದು ನಮಸ್ಕರಿಸಿ ನಿಂತರು. ಗೋಷ್ಠೀಪೂರ್ಣರು, "ನಿಮಗೆ ನಾನು ಕಟ್ಟಪ್ಪಣೆ ಮಾಡಲಿಲ್ಲವೆ, ಬೇರೆ ಯಾರಿಗೂ ಹೇಳಬೇಡಿರೆಂದು; ಹಾಗೆಯೇ ಪ್ರತಿಜ್ಞೆ ಮಾಡಲಿಲ್ಲವೇ ನೀವು; ಇದೇನು ಮಾಡಿದಿರಿ? ಹೇಳಿದ ಮಾತನ್ನು ಮುರಿದಿರಿ" ಎಂದು ಹೇಳಿದಾಗ, ರಾಮಾನುಜರು "ಭಗವನ್, ಆಜ್ಞೋಲ್ಲಂಘನೆ ಮಾಡಿದ್ದೇನೆಂದು ಒಪ್ಪಿಕೊಳ್ಳುತ್ತೇನೆ. ಆದರೆ ತಮ್ಮ ಪಾದಗಳ ಮತ್ತು ಮಂತ್ರದ ಮಹಿಮೆ ಎಲ್ಲರಿಗೂ ತಿಳಿದು ಎಲ್ಲರಿಗೂ ಶ್ರೇಯಸ್ಸಾಗಲಿ ಎಂದು ಹಾಗೆ ಮಾಡಿದೆ" ಎಂದರು. ಅದಕ್ಕೆ ಗೋಷ್ಠೀಪೂರ್ಣರು, "ಅದಿರಲಿ, ಗುರುವಿನ ಆಜ್ಞೆಯನ್ನುಲ್ಲಂಘಿಸಿದುದಕ್ಕೆ ಫಲವೇನು ಬಲ್ಲಿರಾ?" ಎಂದು ಕೇಳಲು, ಒಡನೆ ರಾಮಾನುಜರು "ಬಲ್ಲೆ, ನರಕವೇ ಪ್ರತಿಫಲ" ಎಂದರು. ಗೋಷ್ಠೀಪೂರ್ಣರು "ಹಾಗಾದರೆ ತಿಳಿದೂ ಈ ತಪ್ಪು ಮಾಡಿದೆ ಏಕೆ?" ಎಂದು ಕೇಳಲು, ರಾಮಾನುಜರು, "ಭಗವನ್, ಆಜ್ಞೋಲ್ಲಂಘನೆ ಮಾಡಿದುದಕ್ಕೆ ನರಕವೇ ನನಗೆ ಬರುತ್ತದೆ. ನಾನಲ್ಲಿಗೆ ಹೋಗಲೇ ಬೇಕು. ಆಗಲಿ, ಆದರೆ, ನಾನೊಬ್ಬ ನರಕಭಾಜನನಾಗುವುದರಿಂದ ಎಲ್ಲರಿಗೂ ಮುಕ್ತಿಗೆ ಸಾಧನ ದೊರಕುವಂತಾದರೆ ಏಕೆ ಆಗಬಾರದು?* ಅಲ್ಲದೆ ಈ ತಿರು

* "ಏಕಸ್ಯ ಮರಣಂ ಮೇಽಸ್ತು ಮಾಭೂತ್ಸರ್ವವಿನಾಶನಂ" ಎಂಬ ಸಂತಿ ಲಕ್ಷ್ಮಣ. "ಕಲಿಕಲುಷಕೃತಾನಿ ಯಾನಿ ಲೋಕೇ ಮಯಿ ಶಿರಸಿ ಪತಂತು ವಿಮುಚ್ಯತಾಂ ಹಿ ಲೋಕಃ" ಎಂದು ಬುದ್ಧ ಹೇಳಿದನೆಂದು ಕುಮಾರಿಲಭಟ್ಟರ ಶ್ಲೋಕವಾರ್ತಿಕದಲ್ಲಿದೆ. ಮಹಾತ್ಮರೆಲ್ಲರೂ ಔದಾರ್ಯಾತಿಶಯಸಂಪನ್ನರೇ!

ಮಂತ್ರ ತಮ್ಮ ತಿರುವಡಿಗಳಿಂದ ನನ್ನೆಡೆ ಪ್ರವಹಿಸಿದುದರಿಂದ, ಈ ಎಲ್ಲರ ಮುಕ್ತಿಯ ಪುಣ್ಯ ತಮ್ಮ ತಿರುವಡಿಗಳಿಗೆ. ಈ ಕಾರಣಗಳಿಂದ ತಮ್ಮ ಆಜ್ಞೆಯನ್ನು ಮೀರುವ ಸಾಹಸ ಮಾಡಿದೆನು. ಕ್ಷಮೆ ಬೇಡ ಬಯಸುತ್ತೇನೆ. ತಮ್ಮ ಇಚ್ಛೆಯಿದ್ದಂತೆ ನಡೆಸಬಹುದು" ಎಂದು ಕೈಮುಗಿದು ನಿಂತರು. ಒಡನೆಯೇ ಗೋಷ್ಠೀಪೂರ್ಣರು ಕಣ್ತುಂಬ ನೀರು ತುಂಬಿಕೊಂಡು ರಾಮಾನುಜರನ್ನು ಬಾಚಿ ತಬ್ಬಿಕೊಂಡು "ರಾಮಾನುಜರೇ, ಇಂದು ನೀವು ನನ್ನವರು ; ನನ್ನವರೇ. ಇಂದು ನೀವು 'ಎಂಬೆರುಮಾನಾರ್'—ನನ್ನ ಸ್ವಾಮಿ. ಇನ್ನು ಮುಂದೆ ನೀವು ಪ್ರಚುರಪಡಿಸುವ ಸಿದ್ಧಾಂತ "ಎಂಬೆರುಮಾನಾರ್ ದರ್ಶನ"ವೆಂದು ಹೆಸರಾಗಲಿ; ಬನ್ನಿ, ನನಗೆ ತಿಳಿದಿರುವ ರಹಸ್ಯವೆಲ್ಲವನ್ನೂ ನಿಮಗೆ ಧಾರೆಯೆರೆದು ಕೊಡುತ್ತೇನೆ" ಎಂದು ಬೇರೆಡೆ ಕರೆದುಕೊಂಡುಹೋಗಿ ಚರಮಶ್ಲೋಕಗಳೆಂಬ ಪವಿತ್ರವಾದ ಅತಿ ರಹಸ್ಯವಾದ ಮಂತ್ರಗಳನ್ನುಪದೇಶಿಸಿ "ಯಾರಿಗೂ ಉಪದೇಶಿಸಬೇಡಿ" ಎಂದರು. ಆದರೆ ರಾಮಾನುಜರು "ಕೂರೇಶನಂಥಾ ಪರಮ ಭಕ್ತರನ್ನೂ ಬಿಟ್ಟು ಬಿಡಬೇಕೇ ?" ಎಂದು ಖಿನ್ನರಾಗಿ ಪ್ರಶ್ನಿಸಿದಾಗ, ಗೋಷ್ಠೀಪೂರ್ಣರು "ಸಂವತ್ಸರವಾಗಲಿ, ಆರು ತಿಂಗಳಾಗಲಿ, ಮೂರು ತಿಂಗಳಾಗಲಿ, ಶಿಷ್ಯನನ್ನು ಚನ್ನಾಗಿ ಪರೀಕ್ಷಿಸಿ ಉಪದೇಶಿಸಿರಿ" ಎಂದರು. ರಾಮಾನುಜರಿಗಿತ್ತ ಬಲು ಹಿಗ್ಗು. ಕೂರೇಶನಿಗೆ ಚರಮ ಶ್ಲೋಕ ರಹಸ್ಯ ತಿಳಿಯಬೇಕೆಂಬ ಆತುರ. ಮೂರು ತಿಂಗಳಾದರೂ ಕಾಯಬೇಕಲ್ಲ. ಕೂರೇಶನಿಗೆ ಒಂದು ಗಳಿಗೆಯೂ ತಾಳಲಾಗದು. ಯೋಚಿಸಿ ಯೋಚಿಸಿ ಕೊನೆಗೆ ಮಠದ ಹೊರಗೆ ಮಾಸೋಪವಾಸ ಮೊದಲು ಮಾಡಿದ. "ಮಾಸೋಪವಾಸ ಒಂದು ಸಂವತ್ಸರಕಾಲ ಗುರು ಶುಶ್ರೂಷೆ ಮಾಡಿದುದಕ್ಕೆ ಸಮ" ಎಂದು ಶಾಸ್ತ್ರವಿದೆಯಂತೆ. ಗುರುವಿನ ಮಠದ ಜಗುಲಿಯಲ್ಲಿ ತಿಂಗಳಕಾಲ ಉಪವಾಸ ಮಾಡಿ, ಗುರುವಿನ ಅನುಗ್ರಹ ಪಡೆದ. ಶಿಷ್ಯನ ಶ್ರದ್ಧೆಯನ್ನು ಕಂಡ ರಾಮಾನುಜರು, ಚರಮ ಶ್ಲೋಕವನ್ನು ಉಪದೇಶಿಸಿದರು. ದಾಶರಥಿಗೂ ಚರಮಶ್ಲೋಕದ ರಹಸ್ಯ ತಿಳಿಯಬೇಕೆಂದು ಆತುರ; ಆದರೆ ರಾಮಾನುಜರು ಆತನು ಗೋಷ್ಠೀಪೂರ್ಣರಿಂದಲೇ ತಿಳಿಯಬೇಕೆಂದರು. ದಾಶರಥಿಯಲ್ಲಿ ತನ್ನ ಉಚ್ಚಕುಲದ ಬಗ್ಗೆ ಕೊಂಚ ಅಭಿಮಾನವಿದ್ದೇ ಇತ್ತು; ಅದನ್ನು ಗೋಷ್ಠಿಪೂರ್ಣರು ಪೂರ್ಣವಾಗಿ ಹೋಗಲಾಡಿಸಿ, ಬಳಿಕ ಮಂತ್ರೋಪದೇಶವನ್ನು ಮಾಡಿದರು. ಅಂದು ಯತಿರಾಜರ

ತ್ರಿದಂಡ ಪವಿತ್ರಗಳೂ ಪೂರ್ಣವಾದವು. ಈ ಸಮಯದಲ್ಲೇ ಅನೇಕರು ರಾಮಾನುಜರನ್ನಾಶ್ರಯಿಸಿದರು. ರಾಮಾನುಜರ ಶಿಷ್ಯರ ಬಗ್ಗೆ ಪ್ರಸ್ತಾಪಿಸುವುದೆಂದರೆ ಅದೇ ಒಂದು ಗ್ರಂಥವಾಗುವುದು. ಇಲ್ಲಿ ಅವರ ವಿಷಯವಾಗಿ ಬೇರೇನನ್ನೂ ಹೇಳದೆ, ಅತಿಮುಖ್ಯರಾದ ದೇವರಾಟ್, ಆಂಧ್ರಪೂರ್ಣ, ಕಿಡಾಂಬಿಆಚ್ಚಾ, ಧನುರ್ದಾಸ ಮೊದಲಾದ ಮಹನೀಯರು ರಾಮಾನುಜರ ಸುತ್ತ ನಿಂತು ಶ್ರೀವೈಷ್ಣವ ಸಿದ್ಧಾಂತದ ಮತ್ತು ಸಂಪ್ರದಾಯದ ಬೆಳವಣಿಗೆಗೆ ಕಾರಣರಾದರೆಂದು ಸೂಚಿಸಿ ನಿಲ್ಲಿಸಬೇಕಾಗಿದೆ.

ಗೋಷ್ಠೀಪೂರ್ಣರ ಸಲಹೆಯ ಮೇರೆಗೆ ರಾಮಾನುಜರು ಮಾಲಾಧರರೆಂಬುವರಿಂದ ತಿರುವಾಯ್ಮೊಳಿಯ ಅಭ್ಯಾಸಕ್ಕೆ ಮೊದಲುಮಾಡಿದರು. ಮಾಲಾಧರರೇನೋ ತಾವು ಯಾಮುನಾಚಾರ್ಯರಿಂದ ಕೇಳಿದ್ದಂತೆಯೇ ಅರ್ಥವನ್ನು ಹೇಳುತ್ತಿದ್ದರಾದರೂ, ಕೆಲವುವೇಳೆ ರಾಮಾನುಜರು ಆಳ್ವಾರರ ಹೃದಯವನ್ನೂ ಯಾಮುನರ ಮನೋಭಿಪ್ರಾಯವನ್ನೂ ಚನ್ನಾಗಿ ತಿಳಿದು ಇನ್ನೂ ಸ್ವರಸವಾದ ಅರ್ಥವನ್ನು ಹೇಳುತ್ತಿದ್ದರು. ಇದರಿಂದ ಕೆಲವು ವೇಳೆ ಬಿಕ್ಕಟ್ಟಿನ ಸಂದರ್ಭಗಳು ಏರ್ಪಟ್ಟಾಗ ಗೋಷ್ಠೀಪೂರ್ಣರು ಬಂದು ಮಾಲಾಧರರಿಗೆ, "ರಾಮಾನುಜರು ಯಾಮುನಾಚಾರ್ಯರಿಗೆ ದ್ರೋಣನಿಗೆ ಏಕಲವ್ಯನಿದ್ದಂತೆ. ಯಾಮುನರ ಹೃದ್ಗತವನ್ನು ಯತಿರಾಜ ಚನ್ನಾಗಿ ಬಲ್ಲ. ರಾಮಾನುಜರಿಗೆ ತಿರುವಾಯ್ಮೊಳಿಯ ಅರ್ಥ ಹೇಳಲು ನೀನೊಬ್ಬ ಲೌಕಿಕ ನಿಮಿತ್ತವಷ್ಟೇ" ಎಂದು ಸಮಾಧಾನ ಹೇಳಿದರು. ಕ್ರಮೇಣ, ರಂಗನಾಥನ ಅಂತರಂಗ ಭಕ್ತರಾದ ತಿರುವರಂಗಪ್ಪೆರುಮಾಳ್ ಅರೈಯಾರರಿಂದ ರಾಮಾನುಜರಿಗೆ ಪಂಚಮೋಪಾಯವಾದ ಆಚಾರ್ಯಪ್ರಪತ್ತಿಯೂ ಉಪದಿಷ್ಟವಾಯಿತು. ಅಂದಿನಿಂದ ರಾಮಾನುಜರು ಉಪದೇಶ ಮಾಡಲು ಸಿದ್ಧರಾದರು; ಪಕ್ವವಾದ ಆತ್ಮಕ್ಕೆ ಉಪದೇಶ ಅಭ್ಯಾಸಗಳೂ ದೊರೆತು ಇತರ ಆತ್ಮಗಳ ರಕ್ಷಣೆಯ ಭಾರವನ್ನು ಹೊರಲು ಯೋಗ್ಯತೆಬಂದಿತು.

ಉಪದೇಶ ಮೊದಲಾದುದು ಶ್ರೀರಂಗದ ಮಠದಲ್ಲಿ. ಮೊಟ್ಟಮೊದಲು ಪ್ರಚಾರದ ಬಗ್ಗೆ ರಚಿತವಾದುವು ಮೂರು ಗದ್ಯಗಳು—ಶ್ರೀರಂಗ ಗದ್ಯ, ಶರಣಾಗತಿ ಗದ್ಯ ಮತ್ತು ವೈಕುಂಠಗದ್ಯ ಎಂಬುವು; ಅನಂತರ "ನಿತ್ಯಗ್ರಂಥ"ವೆಂಬ ಶ್ರೀವೈಷ್ಣವ ಪೂಜಾವಿಧಾನ; "ಭಗವದ್ಗೀತೆ"ಯ ಮೇಲೆ ಭಾಷ್ಯ.

ಶ್ರೀರಂಗದಲ್ಲಿ ದೇವಸ್ಥಾನದ ಕೆಲಸಕಾರ್ಯಗಳಲ್ಲಿ ವ್ಯವಸ್ಥೆ ತರಲು ಪ್ರಯತ್ನ ಮಾಡಿದುದರಿಂದ, ಕೆಲವರಿಗೆ ಇವರಮೇಲೆ ದ್ವೇಷಹುಟ್ಟಿ ಇವರನ್ನು ಕೊಲ್ಲ ಬೇಕೆಂಬ ಉದ್ದೇಶದಿಂದ ಒಂದೆಡೆ ಇವರು ಭಿಕ್ಷೆಗಾಗಿ ಹೋಗುವ ಮನೆಯಲ್ಲಿ ವಿಷಮಿಶ್ರವಾದ ಅನ್ನ ಸಿಗುವಂತೆ ಮಾಡಿದರು. ರಾಮಾನುಜರು ಹೇಗೋ ಇದನ್ನರಿತು "ಸಗರ (ಗರ– ಎಂದರೆ ವಿಷ, ಸಗರ–ವಿಷ ಸಹಿತವಾದ) ವಾದ ಈ ಅನ್ನ ಸಾಗರಕ್ಕೇ ಸೇರಲಿ" ಎಂದು ಕಾವೇರಿಯಲ್ಲಿ ಬಿಸುಟು ಉಪವಾಸ ವಿರುವುದೆಂದು ನಿಶ್ಚಯಮಾಡಿದರು. ಈ ವೇಳೆಗೆ ಗೋಷ್ಠೀಪೂರ್ಣರು ಬಂದು ರಾಮಾನುಜರ ಬಗ್ಗೆ ಅತಿಶಯವಾದ ಭಕ್ತಿಪ್ರೀತಿಗಳನ್ನು ಹೊಂದಿದ ಶಿಷ್ಯ ನೊಬ್ಬನಿಗೆ ಅವರ ದೇಹದ ರಕ್ಷಣೆಯ ಭಾರವನ್ನು ವಹಿಸಿದರೆಂದು ತಿಳಿಯು ಬರುತ್ತದೆ. ಇದೇ ಸಮಯದಲ್ಲೇ ಯಜ್ಞಮೂರ್ತಿಯೆಂಬ ಅದ್ವೈತ ವಿದ್ವಾಂಸನೊಬ್ಬನು ಭರತಖಂಡದ ನಾನಾಭಾಗಗಳಲ್ಲಿ ವಾದಮಾಡಿ ಜಯ ಶೀಲನಾಗಿ ರಾಮಾನುಜರನ್ನು ವಾದದಲ್ಲಿ ಜಯಿಸಬೇಕೆಂದು ಶ್ರೀರಂಗಕ್ಕೆ ಬಂದನು. ಹದಿನಾರುದಿನ ವಾದನಡೆದು ಎರಡು ಪಕ್ಷಗಳೂ ಸಮಸಮ ವಾಗಿರಲು, ಹದಿನೇಳನೆಯ ದಿನ ಜಯಲಕ್ಷ್ಮಿ ಯಜ್ಞಮೂರ್ತಿಯನ್ನೊಲಿ ಯುವ ಘಟ್ಟ ಒದಗಿ ನಿಂತಿತು. ರಾಮಾನುಜರು ಅತಿ ಖಿನ್ನರಾಗಿ ತಮ್ಮ ಅರ್ಚಾವಿಗ್ರಹವಾದ ವರದರಾಜನ ಮುಂದೆ ಕೈಜೋಡಿಸಿ, ಕಣ್ಣುಂಬ ನೀರು ಧಾರೆಧಾರೆಯಾಗಿ ಸುರಿಯುತ್ತಿರಲು, "ಪ್ರಭೋ, ನಾನು ವಾದದಲ್ಲಿ ಸೋತೆ ನೆಂದರೆ ಅದರಲ್ಲಿ ಅತಿಶಯವೇನೂ ಇರದು. ಆದರೆ ನಿನ್ನ ಮಾತುಗಳು— ವೇದದಲ್ಲಿನ ಮತ್ತು ಪ್ರಬಂಧದಲ್ಲಿನ–ಮಾತುಗಳು ಹುಸಿಯಾಗುವಂತಾಯಿತೇ! ಮಾಯಾವಾದ ನಿನ್ನನ್ನೂ ನಿನ್ನ ನೆಚ್ಚಿದವರನ್ನೂ ಒಟ್ಟಿಗೆ ಎಳೆದು ಮಡುವಿಗೆ ತಳ್ಳುವ ಪ್ರಸಂಗ ಬಂದಿತೇ! ಜೀವನ ಮೋಕ್ಷಕ್ಕಿದ್ದ ಆಸೆ ನಿರ್ಮೂಲವಾಗು ವಂತಾಯಿತೇ! ಇದೂ ನಿನ್ನ ಲೀಲೆಯಾದರೆ, ಒಳಿತು, ಆಗಲಿ" ಎಂದು ವಿಜ್ಞಾಪಿಸಿ ಮಲಗಿದಾಗ, ಸ್ವಪ್ನದಲ್ಲಿ ವರದರಾಜ "ಗುರುಗಳಾದ ಯಾಮುನರ ಗ್ರಂಥಗಳಲ್ಲಿರುವ ಖಂಡನೆಯನ್ನುಪಯೋಗಿಸು" ಎಂದನಂತೆ. ಮರುದಿನ ವಾದಸ್ಥಾನಕ್ಕೆ ರಾಮಾನುಜರೇ ಬಂದ ರೀತಿಯನ್ನು ಕಂಡ ಯಜ್ಞಮೂರ್ತಿ ಉದ್ದಕ್ಕೆ ನಮಸ್ಕರಿಸಿ, "ನಾನು ಪರಾಜಿತ, ನನಗೆ ತತ್ತ್ವ ತಿಳಿಯದು; ಶಿಷ್ಯ ನನ್ನಾಗಿ ಮಾಡಿಕೊಂಡು ಉಪದೇಶ ಕೊಡಬೇಕು ಎಂದು ಬೇಡಿದನು. ಅಂದು ಯಜ್ಞಮೂರ್ತಿ ದೇವರಾಜನಾದ.

ತಿರುವಾಯ್ಮೊಳಿಯಲ್ಲಿ ತಿರುಪತಿಯ ವರ್ಣನೆ ಕೇಳಿದಂದಿನಿಂದ ರಾಮಾನುಜರಿಗೆ ಅಲ್ಲಿಗೆ ಹೋಗಿ ಶ್ರೀನಿವಾಸನ ಸೇವೆ ಮಾಡಬೇಕೆಂಬ ಆಸೆ. ರಂಗನಾಥನ ಅಪ್ಪಣೆ ಪಡೆದು, ತಿರುಪತಿಗೆ ಹೋಗುವ ಸಿದ್ಧತೆಯಾಯಿತು. ಯಾತ್ರೆ ಹೊರಟು ಪುಹಿತಕ್ಷೇತ್ರ, ದೇಹಲೀ ನಗರ (ತಿರುಕ್ಕೋವಲೂರ್) ಚಿದಂಬರಗಳ ಮುಖಾಂತರವಾಗಿ ಅಷ್ಟಸಹಸ್ರ ಗ್ರಾಮಕ್ಕೆ ಬಂದರು. ಅಲ್ಲಿ ಯಜ್ಞೇಶ ವರದಾರ್ಯರೆಂಬ ಹೆಸರಿನ ಧನಿಕ-ದರಿದ್ರ ಶಿಷ್ಯರಿಬ್ಬರಿದ್ದರು. ಧನಿಕನಿಗೆ ರಾಮಾನುಜರು ತನ್ನಲ್ಲೇ ಬಂದುಳಿಯುವರೆಂಬ ನಂಬಿಕೆ; ಅದುದರಿಂದ ಕೊಂಚ ಭಾಗವತಾಪಚಾರವನ್ನೂ ಮಾಡಿದ್ದ. ರಾಮಾನುಜರು ವರದಾರ್ಯರ ಮನೆಗೆ ಹೋದಾಗ ಮನೆಯ ಯಜಮಾನ ಮನೆಯಲ್ಲಿರಲಿಲ್ಲ; ಅತಿಬಡವರ ಗುಡಿಸಿಲಿನಲ್ಲಿ ಗುರುವಿಗಾಗಿ ತನ್ನೆಲ್ಲವನ್ನೂ ತ್ಯಾಗ ಮಾಡಲು ಸಿದ್ಧಳಾದ ವರದಾರ್ಯರ ಹೆಂಡತಿಯು ರಾಮಾನುಜರಿಗೂ ಅವರ ಶಿಷ್ಯರಿಗೆ ಆತಿಥ್ಯವೇರ್ಪಡಿಸಿದಳು. ಅನಂತರ ಆಕೆಗೊದಗಿದ ಅತಿ ಕಷ್ಟದ ಪ್ರಸಂಗವನ್ನು ಬಹು ಸುಲಭವಾಗಿಯೂ ಎಲ್ಲರಿಗೂ ಶ್ರೇಯಸ್ಕರವಾಗಿಯೂ ಮುಖ್ಯವಾಗಿ ಪಾಪವನ್ನು ಕೂಡ ಮಾಡಿ ಗುರುವನ್ನು ಪೂಜಿಸಬೇಕೆಂದು ಬಗೆದ ಆಕೆಗೂ, ಆ ಪಾಪದಲ್ಲಿ ಭಾಗಿಯಾಗಲಿದ್ದ ಅಲ್ಲಿನ ವರ್ತಕನಿಗೂ ಶ್ರೇಯಸ್ಸುಂಟಾಗುವಂತೆ ರಾಮಾನುಜರು ನಿರ್ವಹಿಸಿ ಕಾಪಾಡಿದರು. ಇತ್ತ ಯಜ್ಞೇಶನಿಗೆ ಹೇಳಿಕಳುಹಿಸಿ, ಧನಮದದಿಂದ ಮೆರೆಯಬಾರದೆಂದು ತಿಳಿಯ ಹೇಳಿ ಆತನನ್ನೂ ಸಚ್ಛಿಷ್ಯನನ್ನಾಗಿ ಮಾಡಿದರು. ಅಲ್ಲಿಂದ ಕಾಂಚೀಪುರದಲ್ಲಿ ವರದರಾಜನನ್ನು ಸೇವೆಮಾಡಿ, ತಿರುಪತಿಗೆ ಬಂದು ಶ್ರೀನಿವಾಸಸಂದರ್ಶನ ಮಾಡಿದರು. ಆಗಲೇ ಬಹುಕಾಲದ ಮೇಲೆ ಶೈವನಾಗಿದ್ದು ವೈಷ್ಣವನಾದ, ಶ್ರೀಶೈಲಪೂರ್ಣರ ಊಳಿಗಕ್ಕೆ ನಿಂತ ಗೋವಿಂದನನ್ನು ಕಂಡುದು; ಆತನನ್ನು ಕರೆದೊಯ್ದುದು. ಮತ್ತೆ ಶ್ರೀರಂಗಕ್ಕೆ ಬಂದು ಸೇರಿದರು ರಾಮಾನುಜರೂ ಅವರ ಶಿಷ್ಯರೂ.

ಬೌದ್ಧರೂ ಜೈನರೂ ಮಾಯಾವಾದಿಗಳೂ ಪ್ರಬಲರಾಗಿ ವೈದಿಕ ಮತಕ್ಕೆ ಆಸರೆಯೇ ಇಲ್ಲದಂತಾಗುವ ಕಾಲವೊದಗಿದ್ದುದರಿಂದ, ವಿಶಿಷ್ಟಾದ್ವೈತದ ಪ್ರಚಾರ ಬಹು ಅಗತ್ಯವಾಯಿತು. ಪ್ರಚಾರಕ್ಕೆ ಮುನ್ನ ಬ್ರಹ್ಮಸೂತ್ರಗಳಿಗೆ ಭಾಷ್ಯಸಿದ್ಧವಾಗಬೇಕಾಯಿತು. ಅಂತೆಯೇ ರಾಮಾನುಜರೂ

ಭಾಷ್ಯರಚನೆಗೆ ತೊಡಗಿದರು; ಕೂರೇಶ ಗುರು ಹೇಳಿದುದನ್ನು ಬರೆಯಲಿಕ್ಕೆ. ಭಾಷ್ಯವನ್ನು ಬರೆಯುವಕಾಲದಲ್ಲಿ ಕೂರೇಶನಿಗೆ ಎಲ್ಲಿ ಸಂದೇಹ ಬರುತ್ತದೋ ಅಲ್ಲಿ ಆತನು ನಿಲ್ಲಿಸಿಬಿಡಬೇಕೆಂದು ರಾಮಾನುಜರ ಆಜ್ಞೆ. ಹಲವಾರು ಸೂತ್ರಗಳಿಗೆ ಭಾಷ್ಯ ಬರೆಸಿದರು ಗುರುಗಳು; ಕೂರೇಶ ಬರೆದಾಯಿತು. ಜೀವಾತ್ಮನ ಲಕ್ಷಣ ಹೇಳುತ್ತಾ ಚಿತ್ಸ್ವಭಾವ (ಜ್ಞಾನವೆಂಬ ಸ್ವಭಾವವುಳ್ಳದ್ದು) ಎಂದು ರಾಮಾನುಜರು ಹೇಳಿ ಮುಂದೆ ಹೇಳುತ್ತಾ ಹೋದರು. ಕೂರೇಶ ಮುಂದೆ ಒಂದಕ್ಷರವನ್ನೂ ಬರೆಯದೆ ಸುಮ್ಮನೆ ಕುಳಿತ. ರಾಮಾನುಜರು ತಾವು ಹಿಂದೆ ಕೊಟ್ಟಿದ್ದ ಆಜ್ಞೆಯನ್ನು ಮರೆತು "ಏನಿದು, ಕುಳಿತೆ? ನಾನು ಹೇಳುವಂತೆ ಬರೆಯುವೆಯೋ, ಇಲ್ಲ ನೀನೇ ಭಾಷ್ಯ ಬರೆಯುವೆಯೋ?" ಎಂದು ಗದರಿಸಿದರು. ಕೂರೇಶ ತುಟಿ ಪಿಟಕ್ಕೆನ್ನಲಿಲ್ಲ. ರಾಮಾನುಜರು ತುಂಬ ಕೋಪಗೊಂಡು, ನಡಿ, ಹೊರಡಾಚೆ" ಎಂದರು. ಉಳಿದ ಶಿಷ್ಯರು ಬಂದು ಕೂರೇಶನನ್ನು "ಇದೇನು ಮಾಡಿದೆ, ಗುರುಗಳು ಇಷ್ಟು ಕುಪಿತರಾಗಿದ್ದಾರೆ, ಸುಮ್ಮನೆ ಕುಳಿತಿದ್ದೀಯೆ" ಎಂದು ಕೇಳಲು, ಕೂರೇಶ "ಗುರುವು ಶೇಷಿ, ನಾನು ಶೇಷ; ಗುರುವು ಆಧಾರ, ನಾನು ಆಧೇಯ; ಗುರುವು ದೇವರಂತೆ" ಎಂದಾಗ ರಾಮಾನುಜರು ಆತನನ್ನು ಎಳೆದು ತಬ್ಬಿಕೊಂಡು "ಮಗೂ, ಕೂರೇಶ, ಈಗ ತಿಳಿಯಿತು ನನ್ನ ತಪ್ಪು. ಜೀವಾತ್ಮ ಪರಮಾತ್ಮನವನು. ಪರಮಾತ್ಮ ಶೇಷಿ, ಜೀವಾತ್ಮ ಶೇಷ. ಇದು ಬಹುದೊಡ್ಡದೂ ಅತಿಮುಖ್ಯವೂ ಆದ ತತ್ವ. ಇದಿಲ್ಲವೆಂದರೆ ಸಿದ್ಧಾಂತವೇ ಇಲ್ಲದಂತಾಗುವುದು. ಆದುದರಿಂದಲೇ ನೀನು ಬರೆಯದೆ ಕುಳಿತೆ. ಅಲ್ಲದೆ ನಾನು ನಿನ್ನ ಮೇಲೆ ಕೋಪಗೊಂಡರೂ ಕೈಮುಗಿದು ಇಲ್ಲಿ ಕುಳಿತು ಅದೇ ಸಂಬಂಧವನ್ನು ಜೀವನದಲ್ಲಿ ತೋರಿಸಿರುವೆ, ನಿನಗೆ ನಾನು ಋಣಿ" ಎಂದು ಹೊಗಳಿದರು. ಭಾಷ್ಯ ಮುಂದೆ ಸಾಗಿ ಪೂರ್ಣವಾಯಿತು.

ಪ್ರಚಾರಕ್ಕಾಗಿಯೂ ತೀರ್ಥಯಾತ್ರೆಗಾಗಿಯೂ ರಾಮಾನುಜರು ಶಿಷ್ಯರೊಡನೆ ರಂಗನಾಥನ ಅಪ್ಪಣೆ ಪಡೆದು ಶ್ರೀರಂಗದಿಂದ ದರ್ಭಶಯನ, ಸೇತು, ತಿರುವನಂತಪುರ ಮುಂತಾದ ದಕ್ಷಿಣ ಕ್ಷೇತ್ರಗಳನ್ನು ಸಂದರ್ಶಿಸಿ ಕೆಲವೆಡೆ ರಾಮಾನುಜರು ಮಠಗಳನ್ನು ಸ್ಥಾಪಿಸಿದರು. ಉತ್ತರ ಭಾರತದಲ್ಲಿ ಮಥುರೆ, ನಂದವ್ರಜ, ಗೋವರ್ಧನ, ಬೃಂದಾವನ, ಮುಕ್ತಿನಾಥಕ್ಷೇತ್ರ, ನೈಮಿಶಾರಣ್ಯ,

ಅಯೋಧ್ಯೆ ಮುಂತಲ್ಲ ಕಡೆಗಳಿಗೆ ಹೋಗಿ ಹಲವೆಡೆ ವಾದಿಗಳನ್ನು ಜಯಿಸಿ ಕಾಶ್ಮೀರದಲ್ಲಿ ಶ್ರೀ ಶಾರದಾಪೀಠಕ್ಕೆ ಬಂದರು. ಅಲ್ಲಿ ಸಾಕ್ಷಾತ್ ಸರಸ್ವತಿಯೇ ರಾಮಾನುಜರಿಂದ "ತಸ್ಯಯಥಾಕಪ್ಯಾಸಂ ಪುಂಡರೀಕಮೇವಮಕ್ಷಿಣೀ" ಎಂಬ ಉಪನಿಷದ್ವಾಕ್ಯಕ್ಕೆ ಅರ್ಥ ಹೇಳಿಸಿ, ತುಂಬಾ ಸಂತೋಷಗೊಂಡು ರಾಮಾನುಜರ ಭಾಷ್ಯವನ್ನು ತನ್ನ ತಲೆಯ ಮೇಲಿಟ್ಟುಕೊಂಡು ಗೌರವಿಸಿ, "ಇಂದಿನಿಂದ ಈ ಭಾಷ್ಯ 'ಶ್ರೀಭಾಷ್ಯ.' ನೀವು ಶ್ರೀಭಾಷ್ಯಕಾರರು" ಎಂದು ಅನುಗ್ರಹಿಸಿದ ಳೆಂದು ತಿಳಿಯಬರುತ್ತದೆ. ಕಾಶ್ಮೀರದ ರಾಜನೂ ಬಹಳ ಆಸಕ್ತಿಯಿಂದ ರಾಮಾನುಜರ ಬಳಿ ಬಂದು "ನಿಮ್ಮ ಸಂಪ್ರದಾಯದ ಸರಣಿ ಹೇಗೆ" ಎನ್ನಲು ರಾಮಾನುಜರು "ಬೋಧಾಯನರ ವೃತ್ತಿ, ದ್ರಮಿಡಾಚಾರ್ಯರ ಭಾಷ್ಯ, ಟಂಕ, ಗುಹದೇವ, ಭಾರುಚಿ, ಕಪರ್ದಿ ಮುಂತಾದವರ ವ್ಯಾಖ್ಯಾನಗಳೇ ಈ ಭಾಷ್ಯಕ್ಕೆ ಆಧಾರ" ಎಂದರು. ಒಡನೆ ಪಂಡಿತರನ್ನೆಲ್ಲ ಕಳುಹಿಸಿ ಭಂಡಾರ ದಲ್ಲಿದ್ದ ವೃತ್ತಿ ಭಾಷ್ಯವ್ಯಾಖ್ಯಾನಗಳ ಹಸ್ತಪ್ರತಿಗಳನ್ನು ತಂದು ನೋಡಲು, ರಾಮಾನುಜರು ಹೇಳಿದಂತೆಯೇ ಎಲ್ಲವೂ ಇರಲು ರಾಜನು ಆಶ್ಚರ್ಯದಿಂ ದಲೂ ಭಕ್ತಿಯಿಂದಲೂ ವಂದಿಸಿ ಶಿಷ್ಯತ್ವವನ್ನು ಬೇಡಿದನು. ಬೋಧಾಯನ ವೃತ್ತಿಯಿದ್ದುದು ಅಲ್ಲಿ ಮಾತ್ರ. ರಾಮಾನುಜರಿಗೆ ಅದು ಬೇಕು. ಪಂಡಿತರು ಕೊಡಲೊಪ್ಪಲಿಲ್ಲ. ಇಂತಹ ಸಂದರ್ಭದಲ್ಲಿ, ಕೂರೇಶ "ನಾನೊಮ್ಮೆ ಬೋಧಾಯನ ವೃತ್ತಿಯನ್ನಿಲ್ಲೇ ಓದುತ್ತೇನೆ. ಸಾಕು" ಎಂದ. ಮುಂದೆ ಶ್ರೀಭಾಷ್ಯದಲ್ಲಿ ಬೇಕಾದೆಡೆ ಸೇರಿಸಿಕೊಳ್ಳಲು ಕೂರೇಶನು ಆ ಒಂದು ಬಾರಿ ಬೋಧಾಯನ ವೃತ್ತಿಯನ್ನು ನೋಡಿದುದೇ ಸಾಕಾಯಿತು. ಕಾಶ್ಮೀರದಿಂದ ಹೊರಟು ಕಾಶಿಗೆ ಬಂದು, ಗಂಗೆಯಲ್ಲಿ ಮಿಂದು, ಪ್ರಯಾಗವನ್ನು ಹೊಕ್ಕು, ಜಗನ್ನಾಥವನ್ನು ಸೇರಿ, ಅಲ್ಲಿ ಜಗನ್ನಾಥನ ದರ್ಶನ ಮಾಡಿ, ರಾಮಾನುಜ ಮಠವನ್ನು ಸ್ಥಾಪಿಸಿ, ತಿರುಪತಿಗೆ ಮರಳಿಬಂದರು. ತಿರುಪತಿಗೆ ಬಂದಾಗ, ಅಲ್ಲಿಯ ದೇವರು ಶಿವಮೂರ್ತಿಯೇ ವಿಷ್ಣುಮೂರ್ತಿಯೇ ಎಂಬ ದೊಡ್ಡ ದೊಂದು ಪ್ರಶ್ನೆ ಎದ್ದಿದ್ದಿತು. ರಾಮಾನುಜರು ದೇವರ ಮುಂದೆ ಶಿವಲಾಂಛನ ಗಳನ್ನೂ ವಿಷ್ಣುಚಿಹ್ನಗಳನ್ನೂ ಇಟ್ಟು ಪ್ರಾರ್ಥಿಸಿ, ದೇವರು ವಿಷ್ಣುಮೂರ್ತಿ ಎಂಬ ಸಿದ್ಧಾಂತವನ್ನು ದೇವರೇ ತೋರಿಸಿಕೊಡುವಂತೆ ಮಾಡಿ ಸಮಾಧಾನ ತಂದರು. ಅಲ್ಲಿಂದ ತಮ್ಮ ಹುಟ್ಟೂರಾದ ಶ್ರೀ ಪೆರಂಬೂದೂರು ಮತ್ತು ಕಾಂಚೀ

ಪುರ ಮುಂತಾದ ಅನೇಕ ಕ್ಷೇತ್ರಗಳನ್ನು ಸಂದರ್ಶಿಸಿ ಶ್ರೀರಂಗಕ್ಕೆ ಬಂದು ಸೇರಿದರು.

ಕೆಲವುಕಾಲ ಶ್ರೀರಂಗದಲ್ಲಿರಲು, ರಂಗನಾಥನ ಅನುಗ್ರಹದಿಂದ ಕೂರೇಶನಿಗೆ ಇಬ್ಬರು ಮಕ್ಕಳು ಹುಟ್ಟಿದರು. ರಾಮಾನುಜರು ಶ್ರೀಭಾಷ್ಯ ರಚಿಸಿ ಯಾಮುನಾಚಾರ್ಯರ ಅಭೀಷ್ಟಗಳಲ್ಲೊಂದನ್ನು ನೆರವೇರಿಸಿದ್ದರು. ಈಗ ಈ ಇಬ್ಬರು ಮಕ್ಕಳನ್ನೂ ಕೂರೇಶ ತಂದೊಪ್ಪಿಸಿದಾಗ ಅವರಿಗೆ ಪರಾಶರಭಟ್ಟ ಮತ್ತು ವ್ಯಾಸಭಟ್ಟ ಎಂಬ ನಾಮಕರಣ ಮಾಡಿದರು. ಅನಂತರ ಪರಾಶರರಿಂದ ವಿಷ್ಣುಸಹಸ್ರನಾಮದ ಭಾಷ್ಯ ಬರೆಸಿದರು. ತಮ್ಮ ಸಂಬಂಧಿಕರಲ್ಲೊಬ್ಬನಾದ "ಪಿಳ್ಳಾನ್" ಎಂಬಾತನಿಗೆ ಶ್ರೀ ಶಠಕೋಪರ ಹೆಸರನ್ನಿಟ್ಟು ತಿರುವಾಯ್ಮೊಳಿಗೆ ವ್ಯಾಖ್ಯಾನ ರೂಪವಾದ ವಿವರವನ್ನು ತಮಿಳಿನಲ್ಲಿ ಬರೆಸಿದರು. ಹೀಗೆ ಯಾಮುನಾಚಾರ್ಯರ ಇನ್ನೆರಡು ಅಭೀಷ್ಟಗಳೂ ಈಡೇರಿದುಂತಾದುವು

ಚೋಳಮಂಡಲದ ರಾಜ * ಶೈವರಲ್ಲಿ ವೀರ 'ಶೈವ'. ವಿಷ್ಣುವಿನ ದೇವಸ್ಥಾನಗಳು, ವಿಷ್ಣುಧರ್ಮಾನುಯಾಯಿಗಳನ್ನು ಕಂಡರಾಗದು. ಹೀಗಿರುವಲ್ಲಿ, ಮಗನಾದ ವಿಕ್ರಮ ತಂದೆಗೆ "ವಾಲ್ಮೀಕಿಯ ರಾಮಾಯಣ ಮತ್ತು ನಮ್ಮಾಳ್ವಾರರ ತಿರುವಾಯ್ಮೊಳಿಯಿರುವವರೆಗೆ ವೈಷ್ಣವತ್ವವನ್ನು ತೊಡೆದು ಹಾಕುವುದಾಗದು" ಎನ್ನಲು ಚೋಳರಾಜ "ಶಿವಾತ್ಪರತರಂನಾಸ್ತಿ" ಎಂಬ ಪ್ರತಿಜ್ಞಾವಾಕ್ಯವನ್ನು ಬರೆಸಿ ಎಲ್ಲರ ಸಹಿಯನ್ನೂ ತೆಗೆಸುತ್ತಿದ್ದಾಗ ನಾಲೂರಾನ್ ಎಂಬ ಆತನ ಮಂತ್ರಿಯೊಬ್ಬ "ರಾಮಾನುಜ ಕೂರೇಶರ ಸಹಿಯಿಲ್ಲದ ಈ ವಾಕ್ಯಕ್ಕೆ ಬೆಲೆ ಬಾರದು" ಎನ್ನಲು ರಾಜ "ರಾಮಾನುಜ ಕೂರೇಶರನ್ನು ಹಿಡಿದು ತನ್ನಿ"ರೆಂದು ದೂತರನ್ನಟ್ಟಿದನು. ರಾಜಭಟರು ಮಠದ ಹೊರಗೆ ನಿಂತರು. ಆಗ ಕೂರೇಶ ರಾಮಾನುಜರಿಗೆ ನೀರು ಸಿದ್ಧಮಾಡಿದ್ದ; ರಾಮಾನುಜರ ಸ್ನಾನವಾಗುತ್ತಿತ್ತು. ರಾಜಭಟರು ಬಂದ ವಾರ್ತೆಯನ್ನು ಕೇಳಿ ಕೂರೇಶ ರಾಮಾನುಜರ ಕಾವಿಯ ಬಟ್ಟೆಗಳನ್ನು ಧರಿಸಿ "ನಡೆಯಿರಿ, ನಾನೇ ರಾಮಾನುಜ" ಎಂದು ಭಟರೊಡನೆ ಹೊರಟ; ಮಹಾಪೂರ್ಣರೂ ಕೂರೇಶನೊಡನೆ ಚೋಳರಾಜನ ಬಳಿಗೆ ನಡೆದರು. ಚೋಳರಾಜನ ಆಸ್ಥಾನದಲ್ಲಿ

* "ವಿಕ್ರಮಚೋಳ (ಕ್ರಿ. ಶ. 1113-1128) ನ ತಂದೆ" ಎಂದು ಆ. ಗೋವಿಂದಾಚಾರ್ಯರು ಹೇಳುತ್ತಾರೆ.

ಕೂರೇಶ "ಶಿವಾತ್ಪರತರಂ ನಾಸ್ತಿ" ಎಂಬುದಕ್ಕೆ "ದ್ರೋಣಮಸ್ತಿ ತತಃಪರಂ" ಎಂದು ಹೇಳಿದಾಗ ರಾಜ ಸಿಟ್ಟಿಗೆದ್ದು ಅವರ ಕಣ್ಣುಗಳನ್ನು ಕೀಳಿಸಿದನು. ಮುದುಕರಾದ ಮಹಾಪೂರ್ಣರು ಮಡಿದರು; ಕುರುಡನಾಗಿ ಕೂರೇಶ ಉಳಿದ.

ಇತ್ತ ಕೂರೇಶ ಹೊರಟುಹೋದವೇಳೆ ರಾಮಾನುಜರಿಗೆ ರಾಜಭಟರು ಬಂದಿದ್ದ ವರ್ತಮಾನವು ತಿಳಿದು, ಅವರು ಕೂರೇಶನ ಬಗ್ಗೆ ಬಹುವಾಗಿ ಹೆದರಿ ವ್ಯಥೆಗೊಂಡರು. ಆದರೆ, ಇನ್ನುಳಿದ ಶಿಷ್ಯರಿಗಾಗಿಯೂ, ಉಳಿದಿದ್ದ ಕರ್ತವ್ಯದ ನಿರ್ವಹಣೆಗಾಗಿಯೂ ಚೋಳಮಂಡಲವನ್ನು ಬಿಟ್ಟು ಓಡಿಬರ ಬೇಕಾಯಿತು. ಶ್ರೀರಂಗವನ್ನು ಬಿಟ್ಟು ಮೇಲ್ನಾಡಾದ ಮೈಸೂರಿನ ಕಡೆ ಹೊರಟು ನೀಲಗಿರಿಯ ಅರಣ್ಯಗಳಲ್ಲಿ ಹಲವಾರು ಸಲ ದಾರಿ ತಪ್ಪಿ ಅಲೆ ದಲೆದು ಅಲ್ಲಲ್ಲೇ ತಂಗಿ ಶಿಷ್ಯರನ್ನು ಪ್ರೋತ್ಸಾಹಗೊಳಿಸುತ್ತಾ ಉಪದೇಶದ ಮಾತುಗಳನ್ನಾಡುತ್ತಾ ಹೊಸ ಹೊಸ ಶಿಷ್ಯರನ್ನು ಸೇರಿಸಿಕೊಳ್ಳುತ್ತಾ ಮೈಸೂರು ದೇಶದಲ್ಲಿ 'ಸಾಲಿಗ್ರಾಮ' ಎಂಬ ಊರಿಗೆ ಬಂದರು. ಸಾಲಿಗ್ರಾಮ ದಲ್ಲಿದ್ದ ಶೈವರಲ್ಲಿ ಬಹು ಜನ ಇವರ ಶಿಷ್ಯರಾದರು. ಇಲ್ಲೇ ಆಂಧ್ರಪೂರ್ಣ ರೆಂಬ ಶಿಷ್ಯರು ರಾಮಾನುಜರಿಗೆ ದೊರೆತುದು. ಅಲ್ಲಿಂದ ಹೊರಟು ತೊಂಡ ನೂರಿಗೆ ಬಂದು ಅಲ್ಲಿ ಇರಲು ಸಿದ್ಧಮಾಡಿಕೊಂಡರು. ಇಲ್ಲಿದ್ದಾಗಲೇ ಜೈನ ಮತಾವಲಂಬಿಯಾದ ಹೊಯ್ಸಳ ರಾಜ ಬಿಟ್ಟಿದೇವನು ತನ್ನ ಮಗಳಿಗೆ ಹಿಡಿ ದಿದ್ದ ಪಿಶಾಚವೊಂದನ್ನು ರಾಮಾನುಜರು ಓಡಿಸಿದುದನ್ನು ಕಂಡು ಜೈನಮತ ವನ್ನು ಬಿಟ್ಟು ಶ್ರೀವೈಷ್ಣವಸಂಸ್ಕಾರಗಳನ್ನು ಹೊಂದಿ ವಿಷ್ಣುವರ್ಧನ ನಾದುದು. ಇಲ್ಲಿ ವಾಸಿಸುತ್ತಿದ್ದಾಗಲೇ ವಾದದಲ್ಲಿ ಜಯಿಸಿಬಿಡಲಾಗದಿದ್ದರೆ, ಹೇಗಾದರೂ ರಾಮಾನುಜರನ್ನು ಇಲ್ಲದಂತಾಗಿಸಬೇಕೆಂಬ ದುರಭಿಸಂಧಿಯಿಂದ ಬಂದ ಹನ್ನೆರಡು ಸಹಸ್ರ ಜೈನರನ್ನು ವಾದದಲ್ಲಿ ಗೆದ್ದು ಪರಾಜಿತರನ್ನಾಗಿ ಮಾಡಿ ತಾವು ಆದಿಶೇಷನ ಅವತಾರವೆಂಬುದನ್ನು ಪ್ರಕಟ ಮಾಡಿದರೆಂದು ಸಂಪ್ರದಾಯ. ತೊಂಡನೂರಿನಲ್ಲಿ ಉಪದೇಶದ ಸುಗಂಧವನ್ನು ಎಲ್ಲೆಡೆ ಹರಡುತ್ತ ಇರುವಾಗ, ಒಮ್ಮೆ ಶ್ರೀವೈಷ್ಣವರಿಗೆ ನಿತ್ಯಕರ್ಮಗಳಿಗೆ ಅತ್ಯಗತ್ಯ ವೆನಿಸಿದ "ತಿರುಮಣ್" (ಬಿಳಿಯನಾಮ) ಮುಗಿದುಹೋಗುತ್ತ ಬರಲು, ರಾಮಾನುಜರಿಗೆ ಚಿಂತೆ ಹತ್ತಿತು. ಸ್ವಪ್ನದಲ್ಲಿ ನಾರಾಯಣ ಕಾಣಿಸಿಕೊಂಡು " ಯದುಗಿರಿ ಇಲ್ಲೇ ಸಮೀಪದಲ್ಲಿದೆ, ನೀನು ಬರುವುದನ್ನೇ ಕಾಯುತ್ತಿದ್ದೇನೆ.

ನಿನಗೆ ಬೇಕಾದ ತಿರುಮಣ್ ಅಲ್ಲಿ ಅಪರಿಮಿತವಾಗಿದೆ" ಎಂದು ಹೇಳಿದಂತಾಯಿತು. ಒಡನೆ ರಾಜನಿಗೆ ಹೇಳಿಕಳುಹಿಸಿ, ಕಾಡುಗಳನ್ನು ಕಡಿಸಿ ಯದುಗಿರಿಗೆ ದಾರಿಮಾಡುವ ಏರ್ಪಾಡಾಯಿತು.* ಯದುಗಿರಿಯ ಬಳಿ ಬಂದು ಕಲ್ಯಾಣಿ ಕೊಳದ ಬಳಿ ಚಂಪಕವಕುಲ ವೃಕ್ಷಗಳ ನಡುವೆ ಇದ್ದ ಹುತ್ತವೊಂದನ್ನು ಅಗೆದು ನೋಡಲು ಅಲ್ಲಿ ಶ್ರೀನಾರಾಯಣನ ವಿಗ್ರಹ ರಾಮಾನುಜರಿಗೆ ದೊರಕಿತು. ಪರಮಾನಂದದಿಂದ, ಆ ವಿಗ್ರಹವನ್ನು ಎತ್ತಿಕೊಂಡು ಹುತ್ತದ ಮೇಲೆಯೇ ದೇವಾಲಯವನ್ನು ನಿರ್ಮಿಸಿ ಅಲ್ಲಿ ಶ್ರೀ ನಾರಾಯಣನನ್ನು ಸ್ಥಾಪಿಸಿ ಪೂಜಿಸಿದರು. ಕಲ್ಯಾಣಿಯ ವಾಯವ್ಯ ಮೂಲೆಯಲ್ಲಿ ತಿರುಮಣ್ಣಿನ ರಾಶಿ ರಾಶಿಗಳಿರುವುದು ರಾಮಾನುಜರಿಗೆ ಗೋಚರವಾಗಿ ಅತ್ಯಾನಂದವಾಯಿತು. ಇಷ್ಟಾದರೂ "ಉತ್ಸವ ಮೂರ್ತಿಯಿಲ್ಲದೆ ಹೇಗೆ" ಎಂಬ ಚಿಂತೆ ರಾಮಾನುಜರನ್ನು ಬಾಧಿಸಲು, ಸ್ವಪ್ನದಲ್ಲಿ ತಿರುನಾರಾಯಣ ಬಂದು "ಉತ್ಸವಮೂರ್ತಿ ರಾಮಪ್ರಿಯ ಇಂದು ದೆಹಲಿಯಲ್ಲಿ ತುರುಷ್ಕರಾಜನ ಮನೆಯಲ್ಲಿದ್ದಾನೆ. ಹೋಗಿ ಕರೆದು ತಾ" ಎನ್ನಲು, ರಾಮಾನುಜರು ಶಿಷ್ಯರೊಡನೆ ದೆಹಲಿಗೆ ಪ್ರಯಾಣ ಮಾಡಿ ರಾಜನನ್ನು ಕಂಡರು. ಸುಲ್ತಾನನೂ ಇವರ ಮಾತುಗಳನ್ನು ಕೇಳಿ ಆಶ್ಚರಿಗೊಂಡು, ತನ್ನ ಭಂಡಾರಕ್ಕೆ ಕರೆದೊಯ್ದು "ಇದೋ ಈ ವಿಗ್ರಹಗಳಲ್ಲಿ ನಿಮಗೆ ಬೇಕಾದುದು ಯಾವುದು, ತೆಗೆದುಕೊಳ್ಳಿ" ಎನ್ನಲು ರಾಮಾನುಜರು ನೋಡಿನೋಡಿ ರಾಮಪ್ರಿಯಮೂರ್ತಿ ಕಾಣದಿರಲು, ಖೇದದಿಂದ ನಿಂತಿರಲು, "ಸುಲ್ತಾನನ ಮಗಳು ನನ್ನನ್ನು ತನ್ನ ಕೋಣೆಯಲ್ಲಿ ಸೆರೆಹಾಕಿದ್ದಾಳೆ" ಎಂದಂತಾಯಿತು. ಒಡನೆ ಸುಲ್ತಾನನಿಗೆ ಹೇಳಲು ಆತನು ಬಹು ವಿಸ್ಮಯದಿಂದ ಇವರನ್ನು ತನ್ನ ಮಗಳ ಮನೆಗೆ ಕರೆದೊಯ್ದಾಗ, ಅಲ್ಲಿ ಸುಲ್ತಾನನ ಮಗಳು ಶ್ರೀರಾಮಪ್ರಿಯನನ್ನು ತನ್ನ ಮಂಚದ ಮೇಲೆ ಕೂರಿಸಿ ವಿವಿಧವಾಗಿ ಸೇವೆ ಮಾಡುತ್ತಿದ್ದುದು ಕಂಡಿತು. ರಾಮಾನುಜರು ರಾಮಪ್ರಿಯನನ್ನು ಕಂಡು ಪರಮಾನಂದದಿಂದ "ಬಾ ಎನ್ನ ಭಾಗ್ಯವೇ" ಎಂದು

---

* ಯದುಗಿರಿಗೆ ರಾಮಾನುಜರು ಬಂದುದು ಬಹುಧಾನ್ಯ ಸಂವತ್ಸರದ "ತೈ" ಮಾಸದಲ್ಲಿ ಕ್ರಿ. ಶ. ೧೦೯೯ ಎಂದು ಆ. ಗೋವಿಂದಾಚಾರ್ಯರು. ಬಿಟ್ಟಿದೇವ ಶ್ರೀವೈಷ್ಣವನಾದುದು ೧೧೦೭ ರಲ್ಲಿ ಎಂದು ಮಿ॥ ರೈಸ್‌ರವರ ಅಭಿಪ್ರಾಯ. ಬಹುಧಾನ್ಯವೇನೋ ಕ್ರಿ. ಶ. ೧೦೯೯ ನೆಯ ವರ್ಷವೇ.

ಕೂಗಲು, ಒಡನೆ ರಾಮಪ್ರಿಯ ಮಂಚದಿಂದ ನೆಗೆದು ಓಡಿಬಂದು ರಾಮಾನು ಜರ ತೋಳಿನಲ್ಲಿ ಕುಳಿತನಂತೆ. ರಾಮಪ್ರಿಯನನ್ನು ಕರೆದೊಯ್ಯಲು ಪರಮ ವಿಸ್ಮಿತನಾದ ಸುಲ್ತಾನನೇನೋ ಸಮ್ಮತಿಕೊಟ್ಟ; ಆದರೆ ಸುಲ್ತಾನನ ಮಗಳು "ಆಗದು. ಹಾಗೆ ನೀವು ರಾಮಪ್ರಿಯನನ್ನು ಕರೆದೊಯ್ಯಲೇಬೇಕಾದರೆ. ನನ್ನನ್ನೂ ಆತನೊಡನೆ ಕರೆದೊಯ್ಯಿರಿ" ಎಂದು ಹೇಳಿ ರಾಮಾನುಜರೊಡನೆ ಹೊರಟಳು.* ರಾಮಪ್ರಿಯನಿಗೆ "ಶೆಲ್ವಪ್ಪಿಳ್ಳೈ" ಅಥವಾ "ಸಂಪತ್ಕುಮಾರ" ಎಂಬ ಹೆಸರಿಟ್ಟು ರಾಮಾನುಜರು ಮೇಲುಕೋಟೆಯಲ್ಲಿ ತಂದಿರಿಸಿ, ಉತ್ಸವ ಗಳು ಕಾಲಕಾಲಕ್ಕೆ ನಡೆಯುವಂತೆ ವ್ಯವಸ್ಥೆಮಾಡಿ "ಯತಿರಾಜಮಠ"ವನ್ನು ಸ್ಥಾಪಿಸಿದರು. ಯದುಗಿರಿಯ ದೇವಾಲಯವನ್ನು ಸ್ಥಾಪಿಸುವ ಕೆಲಸದಲ್ಲಿ ಅತಿ ಕಷ್ಟವೂ ಮುಖ್ಯವೂ ಆದ ಕಾಡು ಕಡಿದು ಊರು ಮಾಡುವ ಕೆಲಸ ವನ್ನು ಮಾಡಿ ಸಹಾಯ ಮಾಡಿದ ಪಂಚಮರ ಬಗ್ಗೆ ಕೃತಜ್ಞತೆಯಿಂದಲೋ ಎಂಬಂತೆ, ಅವರ ಉದ್ಧಾರವೂ ಆಗಲೆಂಬ ಪರಮಕಾರುಣಿಕಬುದ್ಧಿಯಿಂದ ಮೇಲುಕೋಟೆ, ಬೇಲೂರಿನ ದೇವಸ್ಥಾನಗಳಿಗೆ ವರ್ಷಕ್ಕೊಮ್ಮೆ ಪ್ರವೇಶ ಮಾಡಬಹುದೆಂಬ ಹಕ್ಕನ್ನಿತ್ತು ಅಸ್ಪೃಶ್ಯರ ಉದ್ಧಾರಕಾರ್ಯಕ್ಕೆ ತಳಹದಿ ಹಾಕಿದರು.

ಇತ್ತ ಕೂರೇಶ ಚೋಳರಾಜನ ಆಸ್ಥಾನದಿಂದ ಶ್ರೀರಂಗಕ್ಕೆ ಬಂದು ತರು ವಾಯ ತಿರುಮಾಲಿರುಂಜೋಲೈ ಎಂಬಲ್ಲಿ ವಾಸಿಸುತ್ತಿದ್ದ. ಮೇಲುಕೋಟೆಯ ಲ್ಲಿನ ಕೆಲಸ ಮುಗಿದೊಡನೆ ರಾಮಾನುಜರು ಶ್ರೀರಂಗಕ್ಕೆ ಬಂದು ಕೂರೇಶ ನನ್ನು ಕರೆತರಿಸಿ, ಆತನ ಬಗ್ಗೆ ಬಹುವಾಗಿ ಸಂಕಟಪಟ್ಟು ವರದನಿಗೆ ಮೊರೆ ಯಿಟ್ಟು ಕಣ್ಣನ್ನು ಹೊಂದುವಂತೆ ಹೇಳಿದಾಗ, ಕೂರೇಶ "ವರದರಾಜಸ್ತವ" ದಿಂದ ವರದನನ್ನು ಸ್ತೋತ್ರಮಾಡಿ ವರದನನ್ನೂ ರಾಮಾನುಜರನ್ನೂ ಸದಾ

---

* ಈಕೆಯ ಹೆಸರು "ಬೀಬೀ ನಾಚ್ಚಿಯಾರ್" ಎಂದು. ಗೋದಾ ದೇವಿಯಂತೆ ಭಗವಂತನನ್ನೇ ವರಿಸಿದವರಲ್ಲಿ ಈಕೆಯೊಬ್ಬಳು. ಮೇಲುಕೋಟೆ ಯಲ್ಲಿ ರಾಮಪ್ರಿಯನೆದುರು ಭೂಮಿಯಲ್ಲಿ ಸೇರಿಹೋದಳೆಂಬ ಕಥೆ ಇದೆ. ವೈಷ್ಣವ ತ್ವಕ್ಕೆ ಬ್ರಾಹ್ಮಣನೇ ಅರ್ಹ, ಇತರರಲ್ಲವೆಂಬ ಸಂಕುಚಿತ ಮನೋಭಾವನೆಗೆ ಎಂತಹ ಪೆಟ್ಟು! ಭಗವಂತನಲ್ಲಿ ಭಕ್ತರಲ್ಲಿ ಭಕ್ತಿಯಿಡುವ ಯಾವನಿಗೇ ಆಗಲಿ ಮುಕ್ತಿಗೆ ಹಕ್ಕಿದೆ ಎಂಬುದಕ್ಕೆ ಇದಕ್ಕಿಂತ ಬೇರೆ ನಿದರ್ಶನ ಬೇಕೇ?

ಕಾಣುವಂತೆ ವರ ಪಡೆದ. ಈ ವೇಳೆಗೆ ಶ್ರೀವೈಷ್ಣವರಿಗೆ ತೊಂದರೆ ಕೊಡು ತ್ತಿದ್ದ ಚೋಳರಾಜನ ಕತ್ತಿನಮೇಲೆ ಹುಣ್ಣೆದ್ದು ಹುಳುಬಿದ್ದು ಆತ ಸಾಯಲು, ಆತನ ಮಗ ರಾಮಾನುಜರ ಮಹಿಮೆಯನ್ನು ಕೇಳಿ ತಿಳಿದು ಪಾಂಡ್ಯಚೇರ ರಾಜ್ಯಗಳ ರಾಜರೊಡನೆ ಬಂದು ಶಿಷ್ಯತ್ವವನ್ನು ಸ್ವೀಕರಿಸಿದನು. ಕೆಲವು ಕಾಲದ ಮೇಲೆ, ರಾಮಾನುಜರ ಪ್ರಾಣದಂತಿದ್ದ ಕೂರೇಶನ ಅಂತ್ಯ ಸಮೀಪಿ ಸಿತು; ರಾಮಾನುಜರ ದುಃಖ ಮೇರೆ ಮೀರಿತಾದರೂ ಭಗವಂತನಚಿತ್ತ ವಿದ್ದಂತೆ ಆಗಲಿ ಎಂದರು.

ಕೂರೇಶನ ಮಗ ಪರಾಶರನಿಗೆ ರಾಮಾನುಜರ ಅನಂತರ ಶ್ರೀವೈಷ್ಣವ ಸಿದ್ಧಾಂತದ ಸುರಕ್ಷಣೆ ಮತ್ತು ಪ್ರಚಾರಗಳ ಕಾರ್ಯವನ್ನು ವಹಿಸುವುದ ಕ್ಕೆಂದು, ರಾಮಾನುಜರು ಆತನನ್ನು ಬಹು ಶ್ರದ್ಧೆಯಿಂದಲೂ ಆದರದಿಂದಲೂ ಬರಮಾಡಿಕೊಂಡು ತಮ್ಮಲ್ಲಿದ್ದ ಎಲ್ಲ ವಿಷಯಗಳನ್ನೂ ಹೇಳಿ, ಆತನಿಗೆ ಇನ್ನೂ ಅನೇಕ ವಿಷಯಗಳನ್ನು ತಿಳಿಸುವಂತೆ 'ಎಂಬಾರ್' ಎಂಬುವರಿಗೆ ಹೇಳಿ, ತಮ್ಮ ಇಹಲೋಕದ ವ್ಯಾಪಾರವೂ ಕೊನೆಯಾಗುತ್ತಿರುವುದನ್ನರಿತು ಶಿಷ್ಯ ರನ್ನೆಲ್ಲಾ ಕರೆದು ಸದುಪದೇಶಮಾಡಿ, ಶ್ರೀರಂಗದ ದೇವಾಲಯದ ಬಗ್ಗೆ ತಕ್ಕ ವ್ಯವಸ್ಥೆಯನ್ನು ಮಾಡಿಸಿ, ಪರಾಶರಭಟ್ಟರನ್ನು ಶ್ರೀವೈಷ್ಣವ ಮಠಗಳ ಚಕ್ರ ವರ್ತಿಯಾಗಿ ಸ್ಥಾಪಿಸಿ, ಇಲ್ಲಿ ತಾವು ನಡೆಸಬೇಕಾಗಿದ್ದ ಕೆಲಸಗಳೆಲ್ಲವೂ ಪೂರ್ಣವಾಗಿ ನಡೆದುದನ್ನು ನೋಡಿ ಮನಸ್ಸು ಸುತೃಪ್ತಿ ಹೊಂದಿರಲು, ಎಂಬಾ ರರ ತೊಡೆಯಮೇಲೆ ತಲೆಯಿಟ್ಟು, ಆಂಧ್ರಪೂರ್ಣರ ತೊಡೆಯಮೇಲೆ ತಮ್ಮ ಪಾದಗಳನ್ನಿಟ್ಟು ಯಾಮುನಾಚಾರ್ಯರ ಪಾದಗಳಮೇಲೆ ಮನಸ್ಸನ್ನು ನೆಲೆ ಗೊಳಿಸಿ, ಕ್ರಿ. ಶ. ೧೧೩೭ ನೆಯ ವರ್ಷದಲ್ಲಿ ಪರಮಪದವನ್ನು ಸೇರಿದರು. ಯಥಾವಿಧಿಯಾಗಿ ಶಿಷ್ಯಕೋಟಿ ಬ್ರಹ್ಮಮೇಧ ಮುಂತಾದ ಸಂಸ್ಕಾರವನ್ನು ನಡೆಯಿಸಿತು. ಇಂತು, ಭಗವದ್ಭಕ್ತರು ತೊಳಲುವುದನ್ನು ಕಂಡು ಅವರ ಉದ್ಧಾರಕ್ಕೆಂದು ಬಂದು ವಿಶಿಷ್ಟಾದ್ವೈತ ಸಿದ್ಧಾಂತವನ್ನು ಸ್ಥಾಪಿಸಿ ಎಲ್ಲ ಜನ ರಿಗೂ ಮುಕ್ತಿಯನ್ನು ಗಳಿಸಿಕೊಳ್ಳಲು ದಾರಿದೋರಿದ ಶ್ರೀ ರಾಮಾನುಜಾಚಾ ರ್ಯರ ಪವಿತ್ರವಾದ ಸ್ಮರಣೆ ಎಲ್ಲರ ಹೃದಯದಲ್ಲಿ ನೆಲೆಗೊಳ್ಳಲಿ.

ಸಿದ್ಧಾಂತದ ಸ್ಥಾಪನೆಗಾಗಿ ರಾಮಾನುಜರು ಶ್ರೀಭಾಷ್ಯ, ವೇದಾರ್ಥ ಸಂಗ್ರಹ, ವೇದಾಂತಸಾರ, ವೇದಾಂತದೀಪ, ಗೀತಾಭಾಷ್ಯ, ಶ್ರೀರಂಗಗದ್ಯ,

ಶರಣಾಗತಿಗದ್ಯ, ವೈಕುಂಠಗದ್ಯ ಮತ್ತು ನಿತ್ಯಗಳೆಂಬ ಗ್ರಂಥಗಳನ್ನು ಬರೆದು, ಅನೇಕ ಶಿಷ್ಯರಿಂದ ಗ್ರಂಥರಚನೆ ಮಾಡಿಸಿ ಅತಿ ಪ್ರಾಚೀನವಾದ ಸಿದ್ಧಾಂತಕ್ಕೆ ಹೊಸ ಮೆರಗುಕೊಟ್ಟು ಲೋಕದ ಉದ್ಧಾರ ಮಾಡಿದ್ದಾರೆಂಬುದನ್ನು ಸದಾ ನೆನಪಿನಲ್ಲಿಡಬೇಕು. ಕೂರೇಶನೊಮ್ಮೆ ಹೇಳಿದ,

"ಹೆಸರುಗಳೆರಡಿವೆ ನಾರಾಯಣ ರಾಮಾನುಜ ಎಂದು—
ಎರಡರಲೂ ನಾಲ್ಕಕ್ಷರವೇ.
ನಾರಾಯಣನಿಗನುಗ್ರಹನಿಗ್ರಹಗಳು ಉಂಟು;
ರಾಮಾನುಜಗೋ
ಅನುಗ್ರಹವೇ." ಎಂದು.

---

* ಈ ಜೀವನ ಚರಿತ್ರೆಯನ್ನು ಬರೆಯಲು ಆ. ಗೋವಿಂದಾಚಾರ್ಯರ **Life of Ramanuja** ಎಂಬುದೂ ಮತ್ತು ಪಿನ್ಬಳಗಿಯ ಪೆರುಮಾಳ್ ಜೀಯರ್‌ರವರು ಬರೆದಿರುವ "ಗುರುಪರಂಪರಾಪ್ರಭಾವ" ವೂ ಆಧಾರಗಳಾಗಿವೆ.

# ರಾಮಾನುಜದರ್ಶನ ಮತ್ತು ಇತರ ದರ್ಶನಗಳು

ಯಾವ ದರ್ಶನದಲ್ಲಿ ಪ್ರತಿಪಾದಿತವಾಗಿರುವ ತತ್ತ್ವವ್ಯವಸ್ಥೆಯನ್ನು ತಿಳಿಯಬೇಕಾದರೂ ಅದರ ಹಿನ್ನೆಲೆಯಲ್ಲಿರುವ ಇತರ ದರ್ಶನಗಳ ಸಿದ್ಧಾಂತಗಳನ್ನು ತಿಳಿಯುವುದು ಆವಶ್ಯಕ. ಅದರಿಂದ ಆ ದರ್ಶನದ ವೈಶಿಷ್ಟ್ಯ, ಅದರ ಸ್ಥಾಪಕರ ಅಥವಾ ಪ್ರಚಾಲಕರ ರಚನಾಸಾಮರ್ಥ್ಯ ಮತ್ತು ಇತರ ದರ್ಶನಗಳೊಡನೆ ಸಾದೃಶ್ಯ ತಾರತಮ್ಯ ಇವುಗಳು ತಿಳಿಯುವುವು. ಸಿದ್ಧಾಂತದ ಪೂರ್ಣಸ್ವರೂಪವು ಐತಿಹಾಸಿಕ ದೃಷ್ಟಿಯಿಂದ ಸ್ಪಷ್ಟಪಡುವುದು. ಈ ಅಭಿಪ್ರಾಯದಿಂದ ರಾಮಾನುಜ ದರ್ಶನದ ಪ್ರಮೇಯ ವ್ಯವಸ್ಥೆಯನ್ನು ಇತರ ದರ್ಶನಗಳ ವಿಮರ್ಶಾತ್ಮಕ ಸಿಂಹಾವಲೋಕನದ ಮೂಲಕ ಸೂಚಿಸುವುದು ಪ್ರಕೃತ ಕರ್ತವ್ಯ.

ರಾಮಾನುಜಾಚಾರ್ಯರು ತಮ್ಮ ಗ್ರಂಥಗಳಲ್ಲಿ ಎಲ್ಲಿಯೂ ವಿಸ್ತಾರವಾಗಿ ಚಾರ್ವಾಕ ಮತದ ಪರೀಕ್ಷೆಯನ್ನು ಮಾಡಿಲ್ಲ. ಆ ಮತವನ್ನು ಇತರ ದಾರ್ಶನಿಕರು ಖಂಡಿಸಿರುವುದು ಇವರಿಗೆ ಅಭಿಮತವಾಗಿದೆ. ಪೂರ್ವ ಮತ್ತು ಉತ್ತರಮೀಮಾಂಸೆಗಳು ಒಂದೇ ಒಂದು ಶಾಸ್ತ್ರವೆಂದು ಇವರ ಅಭಿಪ್ರಾಯವಾದುದರಿಂದ ಪೂರ್ವಮೀಮಾಂಸಾಶಾಸ್ತ್ರದ ಪ್ರಾರಂಭದಲ್ಲಿ ನಡೆಸಲ್ಪಟ್ಟಿರುವ ಚಾರ್ವಾಕಖಂಡನೆಯು ವೇದಾಂತಕ್ಕೆ ಪ್ರಮಾಣವೆಂದು ಇವರ ಮತ.

ಮುಖ್ಯವಾಗಿ ಚಾರ್ವಾಕರ ಅಭಿಪ್ರಾಯದಲ್ಲಿ ಪ್ರತ್ಯಕ್ಷವೊಂದೇ ಪ್ರಮಾಣ, ಪೃಥಿವೀ, ಅಪ್, ತೇಜಸ್ಸು, ವಾಯು ಎಂಬ ನಾಲ್ಕು ಭೂತಗಳೇ ತತ್ತ್ವಗಳು. ಇವನ್ನು ಬಿಟ್ಟು ಆತ್ಮನೆಂಬ ವಸ್ತುವಾಗಲೀ ಈಶ್ವರನಾಗಲೀ ಇಲ್ಲ. ಮೇಲೆ ಹೇಳಿದ ನಾಲ್ಕು ಭೂತಗಳ ಸಂಘಾತವಿಶೇಷವೇ ದೇಹವೆಂದೂ ಅದರಲ್ಲಿ ಆಗಂತುಕವಾಗಿ ಹುಟ್ಟುವ ಧರ್ಮವಿಶೇಷವೇ ಚೈತನ್ಯವೆಂದೂ ಇವರು ಹೇಳುವರು. ದೇಹೋತ್ಪತ್ತಿಗೆ ಪೂರ್ವದಲ್ಲಿರುವ ಮತ್ತು ದೇಹ ಹೋದ ಮೇಲೂ ನಿಲ್ಲುವ ಆತ್ಮವಸ್ತುವಿಲ್ಲವೆಂದು ಇವರು ಪ್ರತಿಪಾದಿಸು

ವುದರಿಂದ ಕರ್ಮವೆಂಬ ಅದೃಷ್ಟವನ್ನು ಇವರು ತಿರಸ್ಕರಿಸಬೇಕಾಯಿತು. ಈ ವಾದವನ್ನು ಬೌದ್ಧರು ಉಚ್ಛೇದವಾದವೆಂದು ವ್ಯವಹರಿಸುತ್ತಾರೆ.

ವಿಶಿಷ್ಟಾದ್ವೈತದರ್ಶನದಲ್ಲಿ ಪ್ರತ್ಯಕ್ಷ, ಅನುಮಾನ ಮತ್ತು ಶಬ್ದ ಎಂದು ಮೂರು ಪ್ರಮಾಣಗಳು ಅಂಗೀಕೃತವಾಗಿವೆ. ಚಾರ್ವಾಕರ ಆತ್ಮ ನಿರಾಕರಣೆಯು ಅಯುಕ್ತವೆಂದು ನೈಯಾಯಿಕರು ಮತ್ತು ಮೀಮಾಂಸಕರು ಇವರುಗಳಿಂದ ನಿರ್ಧರಿಸಲ್ಪಟ್ಟಿದೆ. ಇದು ಈ ದರ್ಶನಕ್ಕೆ ಪೂರ್ಣ ಅಭಿಮತ. ಗೀತೆಯ ಎರಡನೆಯ ಅಧ್ಯಾಯದ ವ್ಯಾಖ್ಯಾನದಲ್ಲಿ ರಾಮಾನುಜಾ ವಿಚಾರಪೂರ್ವಕವಾಗಿ ಸ್ಥಾಪಿಸಿರುವರು. ಉಚ್ಛೇದವಾದವನ್ನು ಬೌದ್ಧರು ಖಂಡಿಸಿ ಸುಖದುಃಖಗಳ ಅನುಭವಕ್ಕೆ ಹಿಂದಿನ ಕರ್ಮ ಕಾರಣವೆಂದೂ ಈಗಿನ ಕರ್ಮ ಮುಂದೆ ಫಲಕೊಡುವುದೆಂದೂ ಸಾಧಿಸಿರುವರು. ಇದು ರಾಮಾನುಜಮತಕ್ಕೆ ಸಮ್ಮತ. ಈಶ್ವರತತ್ತ್ವವನ್ನು ಒಪ್ಪದಿರುವುದು ಚಾರ್ವಾಕ ದರ್ಶನದ ವಿಶೇಷಾಂಶವೇನಲ್ಲ. ಆದುದರಿಂದ, ಶ್ರೀ ಭಾಷ್ಯದಲ್ಲಿ ವಿಸ್ತಾರವಾಗಿ ಕಂಡುಬರುವ ನಿರೀಶ್ವರವಾದದ ಸಾಮಾನ್ಯ ಪರೀಕ್ಷೆಯಲ್ಲಿ ಚಾರ್ವಾಕರ ನಿರೀಶ್ವರವಾದದ ಖಂಡನೆಯೂ ಅಂತರ್ಗತವಾಗಿದೆಯೆಂದು ಭಾವಿಸಬಹುದು.

ಬೌದ್ಧರಲ್ಲಿ ವೈಭಾಷಿಕ, ಸೌತ್ರಾಂತಿಕ, ವಿಜ್ಞಾನವಾದ ಮತ್ತು ಶೂನ್ಯವಾದ ಎಂದು ನಾಲ್ಕು ಸಂಪ್ರದಾಯಗಳು. ಮೊದಲಿನ ಎರಡು ಮತಗಳನ್ನೂ ಸರ್ವಾಸ್ತಿವಾದಿಗಳೆಂದು ಒಟ್ಟು ಸೇರಿಸಿ ಶಂಕರಾಚಾರ್ಯರು ಪರೀಕ್ಷಿಸಿರುತ್ತಾರೆ. ರಾಮಾನುಜಾಚಾರ್ಯರು ಈ ವಿಧವಾದ ಸಾಮಾನ್ಯಪರೀಕ್ಷೆಯೊಡನೆ ಈ ಎರಡು ಸಂಪ್ರದಾಯಗಳ ವಿಶೇಷಪರೀಕ್ಷೆಯನ್ನೂ ಮಾಡಿರುತ್ತಾರೆ.

ಜಗತ್ತು ಕ್ಷಣಿಕವಾದ ಅನೇಕ ಮೂಲತತ್ತ್ವಗಳಿಂದ—ಅಥವಾ ಅವರ ಪರಿಭಾಷೆಯಲ್ಲಿ — ಧರ್ಮಗಳಿಂದ — ನಿರ್ಮಿತವಾಗಿದೆಯೆಂಬುದು ಸರ್ವಾಸ್ತಿವಾದಿಗಳ ಮುಖ್ಯ ಪ್ರಮೇಯ. ಕ್ಷಣಿಕ ಧರ್ಮಗಳ ಸಮುದಾಯ ವಿಶೇಷವೇ ಭೂತಚತುಷ್ಟಯವಾಗಿಯೂ ಪುರುಷನೆಂದು ಇತರ ವಾದಿಗಳಿಂದ ವ್ಯವಹರಿಸಲ್ಪಡುವ ಕರ್ಮಬದ್ಧವಾದ ಪ್ರವಾಹವಿಶೇಷವಾಗಿಯೂ ಪರಿಣತವಾಗು

ವುದು. ಈ ವಿಧವಾದ ಪ್ರಪಂಚನಿರ್ವಾಹಕ್ಕೆ ಸರ್ವಜ್ಞನಾದ ಕರ್ತೃವೊಬ್ಬನಿರ ಬೇಕಾಗಿಲ್ಲ. ಪ್ರತೀತ್ಯಸಮುತ್ಪಾದವೆಂಬ ನೈಸರ್ಗಿಕಕಾರ್ಯಕಾರಣನಿಯ ಮವೇ ಸರ್ವನಿರ್ವಾಹಕವಾದ ತತ್ವ. ಈ ನಿಯಮಕ್ಕನುಸಾರವಾಗಿ ದುಃಖ ವುಂಟಾಗುವುದು. ಅದಕ್ಕೆ ಕಾರಣವಾದ ಅವಿದ್ಯಾದಿ ದೋಷಗಳ ನಿರೋಧ ದಿಂದ ದುಃಖಾನುಭವಕ್ಕೆ ಆಶ್ರಯವಾದ " ಸಂಘಾತ "ವು ನಷ್ಟವಾಗಿ ನಿರ್ವಾಣ ವೆಂಬ ಪುರುಷಾರ್ಥ ಸಿದ್ಧಿಸುವುದು.

ಇದರ ಮೇಲೆ " ಧರ್ಮಗಳು ಕ್ಷಣಮಾತ್ರ ನಿಲ್ಲತಕ್ಕುವು. ಆದರೆ ಪ್ರತ್ಯಕ್ಷಜ್ಞಾನವು ಅನೇಕಕ್ಷಣ ವ್ಯಾಪಿಸುವ ವ್ಯಾಪಾರ; ಆದುದರಿಂದ ಧರ್ಮ ಗಳು ಪ್ರತ್ಯಕ್ಷಕ್ಕೆ ಗೋಚರವಲ್ಲ; ಅವು ಅನುಮೇಯಗಳು " ಎಂದು ಸೌತ್ರಾಂ ತಿಕರು ಪರಿಷ್ಕರಿಸುವರು. ಈ ಪರಿಷ್ಕಾರವನ್ನೂ ರಾಮಾನುಜಾಚಾರ್ಯರು ಒಪ್ಪುವುದಿಲ್ಲ. ಪದಾರ್ಥವು ಪೂರ್ಣವಾಗಿ ನಷ್ಟವಾದ ಮೇಲೆ ಅದರ ನಿಜ ವಾದ ಆಕಾರವಾಗಲಿ ಧರ್ಮವಾಗಲಿ ಜ್ಞಾನಗತವಾಗಿ ನಿಲ್ಲುವುದು ಅಸಂಭವ. ನಾಶವು ಅಪೂರ್ಣವಾಗಿರಬೇಕು ಅಥವಾ ಜ್ಞಾನಗೋಚರವಾದ ಪದಾರ್ಥದ ಆಕಾರವು ಅದರ ಸಾಕ್ಷಾದ್ಧರ್ಮವಾಗಿರಲಾರದು ಎಂದು ಅವರ ವಾದ.

ಸರ್ವಾಸ್ತಿವಾದಿಗಳ ಮೇಲೆ ಸಾಮಾನ್ಯವಾಗಿ ಹೇಳಿರುವ ಆಕ್ಷೇಪಣೆಗ ಳನ್ನು ಈ ರೀತಿ ಸಂಗ್ರಹಿಸಬಹುದು. ಅಖಂಡವಾದ ಪದಾರ್ಥಗಳೆಂದು ನಾವು ತಿಳಿದಿರುವ ವಸ್ತುಗಳೆಲ್ಲ ಸಮುದಾಯಗಳಾದರೆ ಅವುಗಳ ರಚನೆಯಲ್ಲಿ ಅನ್ವ ಯಿಸುವ ಅಂಶಗಳು ಮೊದಲು ಪ್ರತ್ಯೇಕವಾಗಿದ್ದು ಅನಂತರ ಒಟ್ಟುಗೂಡ ಬೇಕು. ಹಾಗಾಗಬೇಕಾದರೆ ಎರಡು ಅವಸ್ಥೆಗಳಲ್ಲಿಯೂ ಅವು ಇರಬೇಕಾ ದುದರಿಂದ ಕ್ಷಣಿಕವಾಗಲಾರವು. ಅನೇಕ ಕ್ಷಣ ವ್ಯಾಪಿಸುವ ಜ್ಞಾನವ್ಯಾಪಾರ ದಲ್ಲಿ ಪದಾರ್ಥಗಳು ವಿಷಯರೂಪದಿಂದ ಅನ್ವಯಿಸಬೇಕಾದರೆ ಅವುಗಳಲ್ಲಿ ಸ್ಥಿರತ್ವವಿರಬೇಕು. ವ್ಯವಹಾರಗಳಲ್ಲಿ ಅನ್ವಯಿಸಬೇಕಾದರೂ ಇದೇ ನಿಯಮ. ಜ್ಞಾನವ್ಯವಹಾರಗಳ ಕರ್ತೃಗಳೂ ಕ್ಷಣಿಕವಾದರೆ ಜ್ಞಾನವಾಗಲಿ ವ್ಯವಹಾರ ವಾಗಲಿ ಅಸಾಧ್ಯವಾಗುವುದು. ಪ್ರವಾಹ ರೂಪದಲ್ಲಿ ಐಕ್ಯ ಮತ್ತು ಸ್ಥೈರ್ಯ ಗಳನ್ನು ಒಪ್ಪುವುದಾದರೆ ಕ್ಷಣಿಕವಲ್ಲದ ಪ್ರವಾಹ ತತ್ವವೊಂದನ್ನು ಒಪ್ಪಬೇಕಾ ಗುವುದು. ಅವಿದ್ಯೆ ಮೊದಲಾದ ಪ್ರಾಣಿಗತದೋಷದಿಂದ ಸಂಘಾತವು ಸಂಭ ವಿಸುವುದೆಂದು ಹೇಳುವುದೂ ಯುಕ್ತವಲ್ಲ. ಸಮುದಾಯಗಳು ಅಸತ್ಯವಲ್ಲ

ದುದರಿಂದ ಅವಿದ್ಯೆಯಿಂದ ಅವುಗಳ ಉತ್ಪತ್ತಿಯಾಗುವುದೆಂದು ಹೇಳುವುದ ಕ್ಕಾಗುವುದಿಲ್ಲ. ಮತ್ತು ಅವಿದ್ಯೆ, ಸಂಸ್ಕಾರ ಇವುಗಳು ಸ್ಥಿರವಾದ ಆಶ್ರಯ ವಿಲ್ಲದೆ ಇರಲಾರವು. ಕಾರಣವು ಪೂರ್ತಿ ಕ್ಷಣಿಕವಾದರೆ ಅದು ಕಾರ್ಯದಲ್ಲಿ ಅನುಗತವಲ್ಲದುದರಿಂದ ಕಾರ್ಯಕಾರಣನಿಯಮವೇ ಸುಳ್ಳಾಗುವುದು. ಅಭಾವದಿಂದ ಭಾವೋತ್ಪತ್ತಿ ಸಾಧ್ಯವಿದ್ದರೆ ಸರ್ವದೇಶಸರ್ವಕಾಲಗಳಲ್ಲಿಯೂ ಕಾರಣದ ಅಭಾವದಿಂದ ಕಾರ್ಯ ಹುಟ್ಟಬೇಕಾಗುವುದು. ಹಾಗಿಲ್ಲದಿರುವುದ ರಿಂದ ಅಭಾವವು ಕಾರಣವಲ್ಲ. ಇದಲ್ಲದೆ, ನಾಶವೆಂದರೆ ವಸ್ತುವಿನ ಅವಸ್ಥಾ ಭೇದವೇ ಹೊರತು ಬೌದ್ಧರು ಹೇಳುವಂತೆ ನಿಶ್ಶೇಷ ಪ್ರಧ್ವಂಸವಲ್ಲ. ಅಭಾವ ದಿಂದ ಉತ್ಪತ್ತಿಯಾಗಿ, ಅಭಾವದಲ್ಲೇ ಲಯವೂ ಆಗಬೇಕಾದವರೆ ಜಗತ್ತು ಅಭಾವಮಯವಾಗಬೇಕಾಗುವುದು. ಇತರ ಪದಾರ್ಥಗಳ ಅಭಾವವೇ ಆಕಾಶವೆಂದು ಬೌದ್ಧರು ವಾದಿಸುವರು. ಇದು ರಾಮಾನುಜ ಸಮ್ಮತವಲ್ಲ. ಆಕಾಶಸದ್ರೂಪ ಮತ್ತು ಅಭಾವವೂ ಭಾವಾಂತರವೇ ಹೊರತು ಶೂನ್ಯವಲ್ಲ. ಆತ್ಮ ಕ್ಷಣಿಕವಲ್ಲ. ಹಿಂದಿನ ಅನುಭವದ ಸ್ಮರಣೆ ಮತ್ತು ಹಿಂದೆ ನೋಡಿದ ವಸ್ತುವನ್ನು ಮತ್ತೆ ನೋಡಿದಾಗ " ಅದೇ ಇದು " ಎಂಬ ಪ್ರತ್ಯಭಿಜ್ಞಾನ ದಿಂದ ಆತ್ಮನ ಸ್ಥಿರತ್ವ ಸ್ಥಾಪಿತವಾಗುವುದು. ಮುಖ್ಯವಾಗಿ, ಬೌದ್ಧರು ಉಪ ದೇಶಿಸುವ ನಿರ್ವಾಣ ಮಾರ್ಗವೇ ಸಾಧ್ಯಸಾಧನ ರೂಪವಾದ ಕಾರ್ಯಕಾರಣ ಭಾವವನ್ನು ಅಪೇಕ್ಷಿಸುವುದು. ಆದರೆ ಕ್ಷಣಿಕವಾದವು ಕಾರ್ಯಕಾರಣ ಭಾವ ವನ್ನೇ ಮೂಲತಃ ತೊಡೆದುಹಾಕುವುದರಿಂದ ಅದು ನಿರ್ವಾಣಮಾರ್ಗಕ್ಕೆ ವಿರೋಧಿಯೆಂಬುವರಲ್ಲಿ ಸಂದೇಹವಿಲ್ಲ;

ಮೂರನೆಯ ಪಂಗಡವಾದ ವಿಜ್ಞಾನವಾದಿಗಳು ಜ್ಞಾನ ಹೊರತು ಬೇರೆ ವಸ್ತುಗಳೇ ಇಲ್ಲವೆಂದು ವಾದಿಸುವರು. ಸ್ವಪ್ನ ಮತ್ತು ಇತರ ಭ್ರಾಂತಿಗಳು ನಿರಾಲಂಬನವಾಗಿರುವಂತೆ ಜ್ಞಾನಸಾಮಾನ್ಯವೇ ನಿರಾಲಂಬನವೆಂದು ಇವರ ಮತ. ಆದರೆ ಜ್ಞಾನದಲ್ಲಿ ವೈವಿಧ್ಯಕ್ಕೆ ಕಾರಣವೇನೆಂಬ ಪ್ರಶ್ನೆಯೇಳಬಹುದು. ವಿವಿಧ ವಾಸನೆಗಳೇ ವೈವಿಧ್ಯಕ್ಕೆ ಕಾರಣವೆಂದು ಇವರ ಉತ್ತರ. ಪ್ರತಿ ಯೊಂದು ವಸ್ತುವೂ ಜ್ಞಾನ ವಿಷಯವಾಗಿಯೇ ಉಪಲಬ್ಧವಾಗುವುದರಿಂದ ಅದಕ್ಕೂ ಜ್ಞಾನಕ್ಕೂ ಭೇದವಿಲ್ಲ. ವಸ್ತು ಒಂದುಪಕ್ಷೆ ಬೇರೆಯಾಗಿದ್ದರೂ ಜ್ಞಾನದಲ್ಲಿ ಪ್ರತಿಬಿಂಬಿತವಾಪ ಹೊರತು ಅದು ನಮಗೆ ಗೋಚರವಾಗುವುದಿಲ್ಲ.

ಪ್ರತಿಬಿಂಬವೆಂದು ನಾವು ತಿಳಿದಿರುವ ಅಂಶವನ್ನು ಬಿಂಬವೆಂದು ಹೇಳುವುದರಲ್ಲಿ ಲಾಘವವಿದೆ. ಮತ್ತು ವಿಜ್ಞಾನಪ್ರವಾಹದಲ್ಲಿರುವ ವಿಚಿತ್ರ ವಾಸನೆಗಳಿಂದ ಈ ವಿಧವಾದ ಬಿಂಬಗಳು ಎದ್ದು ಕಾಣುವುವು.

ರಾಮಾನುಜ ಸಿದ್ಧಾಂತಕ್ಕನುಸಾರವಾಗಿ ಜ್ಞಾನವೆಂಬುದು ಜ್ಞಾತೃ ಮತ್ತು ಜ್ಞೇಯಗಳಿಗೆ ಸಂಬಂಧವನ್ನುಂಟುಮಾಡುವ ಒಂದು ಕ್ರಿಯಾವಿಶೇಷ. ಜ್ಞಾನಕ್ಕೂ ಅರ್ಥಕ್ಕೂ ಎಷ್ಟು ಸಾಹಚರ್ಯವಿದ್ದರೂ ಅವು ಭಿನ್ನಪದಾರ್ಥಗಳು. ಸಾಹಚರ್ಯಸಂಬಂಧವೇ ಭೇದವನ್ನು ಸಮರ್ಥಿಸುತ್ತದೆ. ವಿಜ್ಞಾನಗಳು ಕ್ಷಣಿಕವಾದುದರಿಂದ ಸ್ಥಿರವಾದ ಆಶ್ರಯದಲ್ಲಿ ಮಾತ್ರ ಸಾಧ್ಯವಾದ ವಾಸನೆಗಳಿಗೆ ಅವುಗಳಲ್ಲಿ ಅವಕಾಶವಿಲ್ಲ. ಸ್ವಪ್ನಾದಿಜ್ಞಾನಗಳು ಅತ್ಯಂತ ಅರ್ಥ ಶೂನ್ಯಗಳಲ್ಲ. ಮತ್ತು ಸರಿಯಾದ ಜ್ಞಾನಗಳಿಂದ ಬಾಧಿತವಾಗುವುವು. ಬಾಧಿತವಾಗದ ಜ್ಞಾನಗಳು ಅರ್ಥಗಳನ್ನು ಅವಶ್ಯ ಹೊಂದಿರಬೇಕು. ಜ್ಞಾನ ಅತ್ಯಂತ ಅರ್ಥಶೂನ್ಯವೆಂಬ ಮತ ಸ್ವವಿರೋಧಿ. ಆ ವಾದವೂ ಪರಮಾರ್ಥವಲ್ಲದೆ ಕಲ್ಪನಾಮಾತ್ರವಾಗುವುದು. ಕಲ್ಪನೆಗೂ ಯಥಾರ್ಥ ಜ್ಞಾನಕ್ಕೂ ಭೇದವನ್ನು ಒಪ್ಪಿದರೆ (ಒಪ್ಪಲೇಬೇಕಷ್ಟೆ!) ಜ್ಞಾನಕ್ಕೂ ವಿಷಯಕ್ಕೂ ಭೇದವನ್ನು ಒಪ್ಪಲೇಬೇಕಾಗುವುದು.

ಕೊನೆಯ ಬೌದ್ಧಪಕ್ಷದಲ್ಲಿ ಸರ್ವವೂ ಶೂನ್ಯವೆಂದು ಸಿದ್ಧಾಂತ. ಕೆಲವು ಆಧುನಿಕವಿಮರ್ಶಕರ ಅಭಿಪ್ರಾಯದಲ್ಲಿ ಶೂನ್ಯವಾದಿಗಳು ಅಭಾವವಾದಿಗಳಲ್ಲ. ಶೂನ್ಯವೆಂಬುದು ಪ್ರಪಂಚಾತೀತವಾದ ಪೂರ್ಣ "ಅದ್ವಯ ತತ್ತ್ವ." ಈ ಅಭಿಪ್ರಾಯವು ನಿರಾಧಾರವಲ್ಲ. ರಾಮಾನುಜಾಚಾರ್ಯರ ವಿಮರ್ಶೆಯು ಈ ನವೀನವ್ಯಾಖ್ಯಾನಕ್ಕೆ ಅನ್ವಯಿಸುವುದಿಲ್ಲ. ಶೂನ್ಯವಾದಿಯು ಶೂನ್ಯವು ಕೇವಲ ಅಭಾವ ಅಥವಾ ಅಸತ್ ಎಂದರೂ ಅಭಾವ ಅಥವಾ ಅಸತ್ತು ಸದ್ವಸ್ತುವಿನ ರೂಪಾಂತರವೆಂದು ರಾಮಾನುಜಸಿದ್ಧಾಂತವಾಗಿರುವುದರಿಂದ ಶೂನ್ಯದರ್ಶನವು ಭಾವದರ್ಶನದಲ್ಲಿಯೇ ಅಂತರ್ಗತವಾಗಬೇಕೆಂದು ರಾಮಾನುಜಾಚಾರ್ಯರ ವಿಮರ್ಶೆ.

ಅದು ಅಭಾವವಲ್ಲವೆಂದರೆ ಈ ವಿಮರ್ಶೆನಿರ್ಣಯವು ಅನುಮೋದಿತವಾಯಿತೆಂದು ತಿಳಿಯಬೇಕು. ಎಲ್ಲವೂ ಅಸತ್ ಎಂದು ವಾದಿಸುವವನು ಯಾವ ಪ್ರಮಾಣಗಳ ಸಹಾಯವನ್ನು ಅಪೇಕ್ಷಿಸುವನೋ ಆ ಪ್ರಮಾಣಗಳ

ಸತ್ಯತೆಯನ್ನಾದರೂ ಒಪ್ಪಬೇಕು. ಆದುದರಿಂದ ಸರ್ವ ಶೂನ್ಯತ್ವವು ವಿರುದ್ಧವಾಗುವುದು. ಬೌದ್ಧರು ಸಾಮಾನ್ಯವಾಗಿ ಪ್ರತ್ಯಕ್ಷ ಮತ್ತು ಅನುಮಾನವೆಂಬ ಎರಡೇ ಪ್ರಮಾಣಗಳನ್ನು ಅಂಗೀಕರಿಸುತ್ತಾರೆ. ರಾಮಾನುಜ ಸಿದ್ಧಾಂತದಲ್ಲಿ ಮೇಲೆ ತಿಳಿಸಿದಂತೆ ಮೂರು ಪ್ರಮಾಣಗಳು ಅಂಗೀಕೃತವಾಗಿವೆ. ಕರ್ಮವಾದವು ಎರಡು ದರ್ಶನಗಳಿಗೂ ಅಭಿಮತ. ಇದಲ್ಲದೆ, ಇಚ್ಛೆ, ದ್ವೇಷ, ಸುಖ, ದುಃಖ ಮೊದಲಾದುವುಗಳೆಲ್ಲ ಜ್ಞಾನದ ರೂಪವಿಶೇಷಗಳೆಂದು ಬೌದ್ಧರು ಹೇಳುವರು. ಇದು ರಾಮಾನುಜ ದರ್ಶನದ ಒಂದು ಮೂಲ ತತ್ತ್ವ. ವಿಜ್ಞಾನವಾದಿಗಳ ಮತಕ್ಕನುಸಾರವಾಗಿ ವಿಜ್ಞಾನವು ಸ್ವಯಂಪ್ರಕಾಶಕ. ಈ ಭಾವನೆಯು ವಿಶಿಷ್ಟಾದ್ವೈತದಲ್ಲಿನ ಆತ್ಮನ ಸ್ವಯಂಪ್ರಕಾಶತ್ವನಿರೂಪಣೆಯನ್ನು ಹೋಲುವುದು. ಆತ್ಮವಸ್ತುವು ಕೂಟಸ್ಥನಿತ್ಯವು ಎನ್ನುವ ಸಾಂಖ್ಯ ಮತ್ತು ಅದ್ವೈತ ಮತಕ್ಕೆ ವಿರೋಧವಾಗಿ, ಆತ್ಮಪ್ರತಿನಿಧಿಯಾದ ವಿಜ್ಞಾನಸಂತಾನವು ವಿಕಾರಾಸ್ಪದವೆಂದು ಹೇಳುವ ಬೌದ್ಧದರ್ಶನವು ಜ್ಞಾನಸಂಕೋಚ ವಿಕಾಸರೂಪವಾದ ವಿಕಾರಗಳು ಆತ್ಮನಿಗೆ ಉಂಟೆಂದು ಹೇಳುವ ವಿಶಿಷ್ಟಾದ್ವೈತಕ್ಕೆ ವಿರೋಧಿಯಲ್ಲ. ಮೋಕ್ಷಸ್ವರೂಪದ ವಿಷಯದಲ್ಲಿ ಬೌದ್ಧರಲ್ಲಿ ಕೊನೆಯಪಕ್ಷ ಮೂರು ಸಿದ್ಧಾಂತಗಳಾದರೂ ಇವೆ. ಪುರುಷಾಭಿಮಾನಾಶ್ರಯವಾದ ಆಧ್ಯಾತ್ಮಿಕ ಸಂಘಾತದ ನಿವೃತ್ತಿ ಅಥವಾ ನಿರೋಧವೇ ನಿರ್ವಾಣವೆಂದು ಸರ್ವಾಸ್ತಿವಾದಿಗಳ ಸಾಮಾನ್ಯ ಸಿದ್ಧಾಂತ. ವಾತ್ಸ್ಯಪುತ್ರರೆಂಬ ಒಂದು ಬೌದ್ಧಪಂಗಡವು ಸಂಘಾತವು ನಾಶವಾದ ಮೇಲೂ ಯಾವುದೋ ಒಂದು ಆಧ್ಯಾತ್ಮಿಕಾಂಶವು ಸ್ಥಿರವಾಗಿ ನಿಲ್ಲುವುದೆನ್ನುವರು. ಶೂನ್ಯವಾದಿಗಳು ಶೂನ್ಯತ್ವಪ್ರಾಪ್ತಿಯೇ ಮೋಕ್ಷವೆನ್ನುವರು. ಶೂನ್ಯವು ಅಭಾವವೆಂದರೆ ಸ್ವನಾಶವೇ ಮೋಕ್ಷವೆಂದೂ, ಅದು ಲೋಕಾತೀತವಾದ ಒಂದು ತತ್ತ್ವವೆಂದರೆ, ಆ ರೂಪವನ್ನು ಹೊಂದುವುದೇ ಮೋಕ್ಷವೆಂದೂ ಅರ್ಥವಾಗುವುದು. ಬಾಹ್ಯವಸ್ತುಗಳು ಸ್ವತಂತ್ರತತ್ತ್ವಗಳೆಂಬ ಭ್ರಾಂತಿ ಹೋದರೆ ಆ ಮೂಲಕ ಎಲ್ಲ ಕ್ಲೇಶವೂ ಹೋಗಿ, ವಿಜ್ಞಾನಸಂತಾನವು ಶುದ್ಧವೂ ವಿಷಯಶೂನ್ಯವೂ ಆಗಿ ಪ್ರಕಾಶಿಸುವುದೆಂದೂ ಇದೇ ಮೋಕ್ಷವೆಂದೂ ವಿಜ್ಞಾನವಾದಿಗಳ ಅಭಿಪ್ರಾಯ. ನೈರಾತ್ಮ್ಯಜ್ಞಾನದಿಂದ ಕ್ಲೇಶನಾಶವೂ, ನೈಸ್ಸ್ವಭಾವ್ಯಜ್ಞಾನದಿಂದ ಸರ್ವಜ್ಞತ್ವವೂ ಉಂಟಾಗುವುದೆಂದು ಒಂದು ಪರಿಷ್ಕಾರ. ಮೋಕ್ಷವು ನಿತ್ಯನಾದ

ಆತ್ಮನ ಅನುಭವ, ಆನಂದ ಮತ್ತು ಸಾಮರ್ಥ್ಯಗಳ ಪೂರ್ಣತೆ ಎಂದು ವಿಶಿಷ್ಟಾದ್ವೈತಮತ. ಆದುದರಿಂದ ಆತ್ಮನಾಶವಾಗಲಿ ವಿಷಯನಾಶವಾಗಲಿ ನಿರ್ವಾಣವೆಂಬುದು ಇವರಿಗೆ ಗ್ರಾಹ್ಯವಲ್ಲ. ಈಶ್ವರಪ್ರಾಪ್ತಿಯೇ ಮೋಕ್ಷ ವೆಂದು ಹೇಳುವ ವಿಶಿಷ್ಟಾದ್ವೈತಿಗಳಿಗೂ ನಿರೀಶ್ವರವಾದಿಗಳಾದ ಬೌದ್ಧರಿಗೂ ಈ ವಿಷಯದಲ್ಲಿ ಬಹಳ ದೂರ. ಆದರೆ ಮಹಾಯಾನಬೌದ್ಧರು ಸೇಶ್ವರ ವಾದಿಗಳಾಗಿ ಬುದ್ಧಭಕ್ತಿಯೇ ಪರಮಮಾರ್ಗವೆಂದು ಎತ್ತಿ ಹೇಳಿದ್ದಾರೆ. ರಾಮಾನುಜ ಮತಕ್ಕೆ ಇದು ಸ್ವಲ್ಪ ಹತ್ತಿರ. ಭಕ್ತಿಪ್ರಾಧಾನ್ಯವು ವೈಷ್ಣವ ಮತದಲ್ಲಿ, ವೇದಾಂತದರ್ಶನದಲ್ಲಿ ಪುನಃ ಅಭಿವ್ಯಕ್ತವಾಗುವಂತೆ ಮಾಡು ವುದಕ್ಕೆ ರಾಮಾನುಜಾಚಾರ್ಯರು ಕಾರಣಪುರುಷರಾದರು.

ಜೈನದರ್ಶನದ ವಿಚಾರದಲ್ಲಿ ಮುಖ್ಯವಾಗಿ ವೇದಾಂತಿಗಳೆಲ್ಲ ಎತ್ತಿ ಹೇಳುವ ದೋಷವೆಂದರೆ ತರ್ಕದೋಷ. ಜೈನರು ಸ್ಯಾದ್ವಾದ ಅಥವಾ ಅನೇಕಾಂತವಾದವೆಂಬ ಒಂದು ದರ್ಶನ ಮಾರ್ಗವನ್ನು ಪ್ರತಿಪಾದಿಸಿರುತ್ತಾರೆ. ವಸ್ತುವು ಅನೇಕಾತ್ಮಕ ಮತ್ತು ಅನೇಕ ಮುಖ. ಎಂದರೆ ಬೌದ್ಧರು ಹೇಳು ವಂತೆ ಅದು ಸಮುದಾಯರೂಪಮಾತ್ರದಿಂದ ಐಕ್ಯ ಹೊಂದಿದೆಯೆಂಬುದಲ್ಲ. ದ್ರವ್ಯ ಒಂದೇ ಆಗಿದ್ದರೂ ಬೇರೆಬೇರೆ ಗುಣಗಳು ಇರುವುದರಿಂದಲೋ, ಅವಸ್ಥಾ ಭೇದದಿಂದಲೋ, ಅದರ ಸ್ವಭಾವನಿರ್ದೇಶದಲ್ಲಿ ಅನೇಕತ್ವವು ಸಾಧ್ಯ ಮತ್ತು ಯಥಾರ್ಥ. ಒಂದು ಪದಾರ್ಥದ ವಿಷಯವಾಗಿ ಇದೆ ಮತ್ತು ಇಲ್ಲ ಎಂದು ಏಕದೃಷ್ಟಿಯಿಂದ ಹೇಳುವುದು ವಿರುದ್ಧವಾದರೂ ದೃಷ್ಟಿಭೇದದಿಂದ ಅದು ತಪ್ಪಲ್ಲ ಎಂದು ಸ್ಯಾದ್ವಾದದ ಮುಖ್ಯ ತಾತ್ಪರ್ಯ.

ರಾಮಾನುಜಾಚಾರ್ಯರು ಈ ವಾದವನ್ನು ಈ ರೀತಿ ಆಕ್ಷೇಪಿಸುವರು: ಒಂದೇ ವಸ್ತುವಿನಲ್ಲಿ ಒಂದೇ ಕಾಲದಲ್ಲಿ ಪರಸ್ಪರವಿರುದ್ಧಧರ್ಮಗಳು ಸೇರುವುದು ಅಸಾಧ್ಯ. ಕಾಲಭೇದ, ಅವಸ್ಥಾಭೇದಗಳಿಂದ ಅದು ಸಾಧ್ಯ ವೆನ್ನುವುದಕ್ಕೆ ಆ ವಿಧವಾದ ಕಾಲಭೇದ, ಅವಸ್ಥಾಭೇದ ಮೊದಲಾದುವು ಗಳಿಗೆ ಆ ವಸ್ತು ಸಂಬಂಧಿಸಿದೆಯೆನ್ನುವುದು ವಿವಾದಾಸ್ಪದವಲ್ಲದ, ಪಕ್ಷಪಾತ ವಿಲ್ಲದ ತತ್ತ್ವಸ್ಥಿತಿಯಾಗಿರಬೇಕು. ಅನೇಕಾಂತ ಸಂಭವವಾಗಬೇಕಾದರೆ ಮೂಲಭೂತವಾದ ಏಕಾಂತತತ್ತ್ವವೊಂದಿರಬೇಕು. ಆದುದರಿಂದ ಸರ್ವತೋ ಮುಖವಾದ ಅನೇಕಾಂತವಾದಕ್ಕೆ ಪ್ರಮಾಣವಿಲ್ಲ. ವಿಶಿಷ್ಟಾದ್ವೈತವಲ್ಲಿ

ಬ್ರಹ್ಮ ಸರ್ವಾತ್ಮಕವೆಂದು ಹೇಳುವುದರಿಂದ ಅದೂ ಒಂದು ವಿಧವಾದ ಅನೇಕಾಂತವಾದವೇ ಎಂದು ಜೈನರು ವಾದಿಸಬಹುದು. ಆದರೆ ಬ್ರಹ್ಮ ಮತ್ತು ಜಗತ್ತುಗಳಿಗೆ ಶರೀರಶರೀರ ಸಂಬಂಧವನ್ನು ಹೇಳುವುದರಿಂದ, ಜಗತ್ತು ಬ್ರಹ್ಮವಿಲಕ್ಷಣವಾದುದರಿಂದ, ಒಂದೇ ವಸ್ತುವಿನಲ್ಲಿ ವಿರುದ್ಧಗುಣಗಳ ಸಮಾವೇಶವಾದಂತಾಗುವುದಿಲ್ಲ. ಮತ್ತು ವೈಲಕ್ಷಣ್ಯವಿದ್ದರೂ ಅಂತರ್ಯಾಮಿತ್ವದಿಂದ ಬ್ರಹ್ಮ ಸರ್ವಾತ್ಮಕವೇ ಹೊರತು, ಸ್ವಭಾವಸಾಂಕರ್ಯದಿಂದಲ್ಲ. ಇದಲ್ಲದೆ, ಜೀವ, ಪುದ್ಗಲ, ಧರ್ಮ, ಅಧರ್ಮ, ಕಾಲ, ಆಕಾಶ ಎಂಬ ಆರು ದ್ರವ್ಯಗಳನ್ನು ಬೇರೆ ಬೇರೆ ತತ್ತ್ವಗಳನ್ನಾಗಿ ಅವರೇ ಅಂಗೀಕರಿಸಿರುವುದರಿಂದ ಅನೇಕಾಂತವಾದವನ್ನು ಸಂಪೂರ್ಣವಾಗಿ ನಂಬಿದ್ದರೆ ಈ ಆರು ದ್ರವ್ಯಗಳೂ ಒಂದೇ ತತ್ತ್ವದ ಪರ್ಯಾಯ, ವಿಕಾರ ಅಥವಾ ಅವಸ್ಥೆಗಳೆಂದು ಹೇಳಬೇಕಾಗಿತ್ತು.

ಇನ್ನು ಈ ಎರಡು ದರ್ಶನಗಳಿಗೂ ಇರುವ ಪರಸ್ಪರ ಆನುಕೂಲ್ಯದ ಅಂಶಗಳನ್ನು ಗಮನಿಸಬಹುದು. ಜೈನರು ದ್ರವ್ಯಗಳ ನಿತ್ಯತ್ವವನ್ನೂ ಪರಿಣಾಮಾಸ್ಪದತ್ವವನ್ನೂ ಹೇಳುವುದು ರಾಮಾನುಜದರ್ಶನಕ್ಕೆ ಸರಿಯಾಗಿದೆ. ಜೀವ ಮತ್ತು ಅಜೀವಗಳಿಗೆ ಅವರು ಹೇಳುವ ಸ್ವರೂಪಭೇದವೂ ಸಮ್ಮತ. ವಿಜ್ಞಾನವಾದಿಗಳಿಗೆ ವಿರೋಧವಾಗಿ ಅಜೀವವೂ ಒಂದು ತತ್ತ್ವವೆಂಬ ಅವರ ವಾದವನ್ನು ರಾಮಾನುಜ ಸಿದ್ಧಾಂತವು ಅನುಮೋದಿಸುತ್ತದೆ. ಮೋಕ್ಷವು ಆತ್ಮನ ನೈಸರ್ಗಿಕ ಪ್ರಕಾಶದ, ವೀರ್ಯದ, ಸುಖದ ವಿಕಾಸವೆಂಬುದು ಈ ಎರಡು ದರ್ಶನಗಳಿಗೂ ಸಾಧಾರಣವಾದ ವಿಚಾರ. ಆದರೆ ವಿಶಿಷ್ಟಾದ್ವೈತದಲ್ಲಿ ಈ ವಿಕಾಸವು ಬ್ರಹ್ಮಪ್ರಾಪ್ತಿಯಲ್ಲಿ ಅಂತರ್ಗತವಾದ ಫಲ. ಜೈನಮತಕ್ಕನುಸಾರವಾಗಿ ಜಗತ್ಪ್ರವೃತ್ತಿಯು ಪ್ರಾಣಿಕರ್ಮಪ್ರೇರಿತವಾದ ಪರಮಾಣುಗಳಿಂದ ನಡೆಯುವುದು. ಆದ್ದರಿಂದ ಅಲ್ಲಿ ಈಶ್ವರತತ್ತ್ವ ಅನಪೇಕ್ಷಿತ ಮತ್ತು ವಿರುದ್ಧ. ರಾಮಾನುಜ ದರ್ಶನದಲ್ಲಿ ಕರ್ಮ ಮತ್ತು ಪ್ರಕೃತಿ ಇವು ಸ್ವತಂತ್ರವಾಗಿ ಕೆಲಸಮಾಡಲಾರವೆಂದೂ ಈಶ್ವರನು ಆತ್ಮನೂ ನಿಯಾಮಕನೂ ಆದುದರಿಂದಲೇ ಅವುಗಳ ಪ್ರವೃತ್ತಿ ಸಾಧ್ಯವೆಂದೂ ಸಿದ್ಧಾಂತವಾಗಿದೆ. ಜೈನ ಮತದಲ್ಲಿ ಮೋಕ್ಷಮಾರ್ಗವು ನಿವೃತ್ತಿಪ್ರಧಾನವಾಗಿದೆ. ವಿಶಿಷ್ಟಾದ್ವೈತದಲ್ಲಿ ಅಷ್ಟು ನಿವೃತ್ತಿ ಪ್ರಧಾನವಾಗಿಲ್ಲವೆಂದು ಹೇಳಬಹುದು. ಒಟ್ಟಿನಲ್ಲಿ

ಗೀತೆಯ ನಿಷ್ಕಾಮ ಕರ್ಮವನ್ನೂ ಭಕ್ತಿಪಂಥವನ್ನೂ ಉದ್ಧರಿಸುವ ಯಾವ ದರ್ಶನವೂ ಜೀವನದ ಪೂರಕವೇ ಹೊರತು ಬಾಧಕವಲ್ಲ.

ಇಲ್ಲಿಯವರೆಗೆ ಪ್ರಸ್ತಾಪಿಸಿದ ಮೂರು ದರ್ಶನಗಳೂ ವೇದದ ಪ್ರಾಮಾಣ್ಯವನ್ನು ಒಪ್ಪುವುದಿಲ್ಲ. ಇನ್ನು ಮುಂದೆ ವಿಚಾರಮಾಡುವ ದರ್ಶನಗಳೆಲ್ಲ ಒಂದಲ್ಲ ಒಂದು ರೀತಿಯಲ್ಲಿ ವೇದದ ಪ್ರಾಮಾಣ್ಯವನ್ನು ಒಪ್ಪುತ್ತವೆ.

ಬಹಳ ಹಿಂದಿನಿಂದಲೂ ಪ್ರಬಲವಾದ ದರ್ಶನವೆಂದರೆ ಸಾಂಖ್ಯ ದರ್ಶನ. ಇದು ವೇದಪ್ರಾಮಾಣ್ಯ ಮತ್ತು ಆತ್ಮವಸ್ತುಸದ್ಭಾವಗಳನ್ನು ಒಪ್ಪಿ ವೈದಿಕ ಸಂಪ್ರದಾಯದಲ್ಲಿ ಗೌರವ ಹೊಂದಿತು. ಯಜ್ಞಯಾಗಾದಿಗಳ ಖಂಡನೆ ಮತ್ತು ಈಶ್ವರತತ್ವದ ಅನಂಗೀಕಾರ ಮೊದಲಾದುವುಗಳಿಂದ ಅವೈದಿಕರ ಗುಂಪಿನಲ್ಲೂ ಮನ್ನಣೆ ಪಡೆಯಿತು. ಇವರ ಸಿದ್ಧಾಂತವನ್ನು ಈ ರೀತಿ ಸಂಗ್ರಹಿಸಬಹುದು:—

ತತ್ವಗಳು ಎರಡು; ಪುರುಷ ಮತ್ತು ಪ್ರಕೃತಿ ಎಂದು. ಪ್ರಕೃತಿ ವ್ಯಕ್ತ ಮತ್ತು ಅವ್ಯಕ್ತ ಅವಸ್ಥೆಗಳನ್ನು ಹೊಂದುತ್ತದೆ. ಸತ್ವರಜಸ್ತಮೋಗುಣಗಳ ವಿಲಸವೇ ಇದರ ಮೂಲ ಸ್ವಭಾವ. ಮೂರು ಗುಣಗಳೂ ಸಮವಾಗಿ ಬೆರೆತ ಅವಸ್ಥೆ ಮೂಲಪ್ರಕೃತಿ; ವಿಷಮಾವಸ್ಥೆ ಕಾರ್ಯಪ್ರಕೃತಿ. ಕಾರ್ಯಾವಸ್ಥೆಯಲ್ಲಿ ಬುದ್ಧಿ, ಅಹಂಕಾರ, ಹನ್ನೊಂದು ಇಂದ್ರಿಯಗಳು, ಪಂಚತನ್ಮಾತ್ರಗಳು, ಮತ್ತು ಪಂಚಭೂತಗಳೂ ಹುಟ್ಟುವುವು; ಎಂದರೆ ಅಭಿವ್ಯಕ್ತವಾಗುವುವೆಂದು ತಾತ್ಪರ್ಯ. ಹೀಗೆ ಪ್ರಕೃತಿಯು ಸ್ವತಃ ಜಗತ್ತನ್ನು ನಡೆಸುವದು. ಪುರುಷತತ್ವ ಅನೇಕ, ಚೈತನ್ಯಸ್ವರೂಪ ಮತ್ತು ನಿರ್ವಿಕಾರ. ಆದರೆ ಪುರುಷನ ಸಾಕ್ಷಿತ್ವದ ಮಹಿಮೆಯಿಂದ ಪ್ರಕೃತಿ ಚಲಿಸಿ, ತನ್ನ ಮಹತ್ಕಾರ್ಯಗಳನ್ನು ಪುರುಷನಿಗೆ ಪ್ರದರ್ಶಿಸುವುದು. ಪುರುಷ ಮತ್ತು ಪ್ರಕೃತಿ ಇವುಗಳ ಅವಿವೇಕವೇ (ಇವೆರಡೂ ಬೇರೆಯೆಂದು ಮನಗಾಣದಿರುವಿಕೆಯೇ) ದುಃಖತ್ರಯಕ್ಕೂ ಮೂಲ. ಈ ತತ್ವಗಳ ಸ್ವರೂಪ, ವೈಲಕ್ಷಣ್ಯಗಳೂ ತಿಳಿದಾಗ ಮೋಕ್ಷ ಅಥವಾ ಕೈವಲ್ಯವು ಸಿದ್ಧಿಸುವುದು. ಪ್ರಪಂಚವು ಪ್ರಕೃತಿಯ ಒಂದು ಮಹಾ ನೃತ್ಯ.

ಈ ಮತವು ವೇದದ ಆಧಾರದಿಂದಲೇ ಹುಟ್ಟಿದ್ದೆಂದು ವಾದಿಸುವುದು ಅಯುಕ್ತವೆಂದು ಕೆಲವು ಮುಖ್ಯವಾದ ಉಪನಿಷದ್ಭಾಗಗಳ ಕೂಲಂಕಷ

ಚರ್ಚೆಯಿಂದ ತೀರ್ಮಾನಿಸಲಾಗಿದೆ. ಸಾಂಖ್ಯರು ವೇದಪ್ರಾಮಾಣ್ಯವನ್ನು ಒಪ್ಪುವುದರಿಂದ ಈ ರೀತಿಯ ಖಂಡನೆ ಪ್ರಕೃತವೂ ಪ್ರಯೋಜನಕಾರಿಯೂ ಆಗಿದೆ. ಇದಲ್ಲದೆ ಸ್ವತಂತ್ರವಿಚಾರದಿಂದಲೂ ಈ ಮತ ಅಸಮಂಜಸವೆಂದು ತೋರಿಸಲಾಗಿದೆ. ಮೊದಲಾಗಿ, ಅಚೇತನಪದಾರ್ಥಕ್ಕೆ ಸ್ವತಂತ್ರಪ್ರವೃತ್ತಿಯು ಸಾಧ್ಯವಿಲ್ಲ. ಜಗನ್ನಿರ್ಮಾಣವ್ಯಾಪಾರವು ಚೇತನಕರ್ತೃಕವೇ ಆಗಿರಬೇಕೆಂದೇ ಅನುಭವದಿಂದ ಸಿದ್ಧವಾಗುವದು. ಚೇತನವ್ಯಾಪಾರವಿಲ್ಲದೆಯೂ ಅನೇಕ ಪರಿಣಾಮಪರಂಪರೆಗಳು ನಡೆಯುವುವನ್ನು ನಾವು ನೋಡಿರುವುದರಿಂದ ಪ್ರಕೃತಿಯ ವಿಶ್ವಪ್ರವೃತ್ತಿಯೂ ಅದೇರೀತಿ ನಡೆಯುವುದೆಂದು ಸಾಂಖ್ಯರು ವಾದಿಸಬಹುದು. ಆದರೆ ಯಾವಯಾವ ವ್ಯಾಪಾರಗಳು ಚೇತನಕರ್ತೃಕಗಳಲ್ಲವೆಂದು ಸಾಂಖ್ಯರಿಂದ ಉದಾಹರಿಸಲ್ಪಟ್ಟಿವೆಯೋ ಅವೆಲ್ಲ ಚೇತನಕರ್ತೃಕವಾದ ವ್ಯಾಪಾರಗಳಲ್ಲಿ ಸೇರಿವೆಯೆಂದು ಸಮರ್ಥಿಸಲ್ಪಟ್ಟಿರುವುದರಿಂದ ಉಭಯವಾದಿಸಮ್ಮತವಾಗಿ ಅಚೇತನಪ್ರವೃತ್ತಿಗೆ ದೃಷ್ಟಾಂತವೇ ಇಲ್ಲವೆಂದು ರಾಮಾನುಜಸಿದ್ಧಾಂತ. ಆದುದರಿಂದ ಪ್ರಕೃತಿಯು ಕಾರಣಾವಸ್ಥೆಯನ್ನಾಗಲೀ ಕಾರ್ಯಾವಸ್ಥೆಯನ್ನಾಗಲೀ ಗುಣಸಾಮ್ಯವೈಷಮ್ಯಗಳನ್ನಾಗಲೀ ಸ್ವತಃ ಹೊಂದಲಾರದು. ಸಂಕಲ್ಪಾಧೀನವಾಗಿ ಸ್ಥಿತಿವಿಕಾರಗಳು ಸಾಧ್ಯವೇ ಹೊರತು ಅನ್ಯಹೇತುವಿಲ್ಲದೆ ಅಚೇತನ ವಸ್ತುವು ಪರಿಣಾಮ ಹೊಂದುವುದು ಅಸಂಭವ. ಪುರುಷನ ಸಾಕ್ಷಿತ್ವದಿಂದ ಜಗತ್ಪ್ರವೃತ್ತಿಯಾಗುವುದೆಂದೂ ಹೇಳಲಾಗುವದಿಲ್ಲ. ಏಕೆಂದರೆ ಪುರುಷನು ನಿರ್ವಿಕಾರನು. ಜಗತ್ತಿನ ಪ್ರವೃತ್ತಿಗೆ ಕಾರಣವಾಗಬಹುದಾದ ಕರ್ತೃತ್ವವೂ ಇವನಿಗೆ ಸಲ್ಲುವುದಿಲ್ಲವೆಂದು ಸಾಂಖ್ಯಮತ. ಆದುದರಿಂದ ಇಂತಹ ಪುರುಷನ ಸಾಕ್ಷಿತ್ವವು ಜಗತ್ಪ್ರವೃತ್ತಿಗೆ ಪ್ರಯೋಜಕವಲ್ಲ. ಹೀಗಿದ್ದರೂ ಪುರುಷನೇ ಪ್ರವೃತ್ತಿಮೂಲವೆಂದರೆ ಸರ್ವದಾ ಪ್ರವೃತ್ತಿಯು ಸಂಭವಿಸಬೇಕಾಗಿರುವುದರಿಂದ ಮೋಕ್ಷವಾಗಲಿ ಕಾರಣಾವಸ್ಥೆಯಾಗಲಿ ಇಲ್ಲವೆನ್ನಬೇಕಾಗುವುದು. ನಿರ್ವಿಕಾರನಾದುದರಿಂದ ಬಂಧಮೋಕ್ಷವ್ಯವಸ್ಥೆಯೂ ಆತ್ಮನಿಗೆ ಅನ್ವಯಿಸುವುದಿಲ್ಲ. ಬಂಧಕಾರಣವಾದ ಅವಿವೇಕವೂ ಕೈವಲ್ಯಸಾಧನವಾದ ವಿವೇಕವೂ ಅಚೇತನಪ್ರಕೃತಿಯ ವ್ಯಾಪಾರವಲ್ಲ. ನಿರ್ವಿಕಾರನಾದ ಪುರುಷನಲ್ಲಿ ಅಸಂಭವ. ಇದಿಷ್ಟು ಸಾಂಖ್ಯದರ್ಶನದಲ್ಲಿನ ಖಂಡ್ಯಾಂಶಗಳ ಸಂಗ್ರಹ. ಅಭಿಮತವಾದ ಅಂಶಗಳೂ ಅನೇಕ ಉಂಟು. ಪುರುಷ ಬಹುತ್ವ,

ಪ್ರಕೃತಿಸತ್ಯತ್ವ, ಸತ್ಕಾರ್ಯವಾದ ಇವು ಮುಖ್ಯವಾದುವು. ಪುರುಷನು ಕೇವಲ ನಿರ್ಧರ್ಮಕಚಿನ್ಮಾತ್ರನಲ್ಲವೆಂದೂ ಅವನಿಗೆ ಕರ್ತೃತ್ವ, ಭೋಕ್ತೃತ್ವ, ಜ್ಞಾತೃತ್ವಗಳುಂಟೆಂದೂ ರಾಮಾನುಜ ಸಿದ್ಧಾಂತ. ಭಗವತ್ಪ್ರಾಪ್ತಿ ಮತ್ತು ಅದರಿಂದುಂಟಾಗುವ ಕಲ್ಯಾಣಗುಣವಿಕಾಸಗಳು ಮೋಕ್ಷವೇ ಹೊರತು ಕೇವಲ ಪ್ರಕೃತಿಪುರುಷವಿಯೋಗರೂಪವಾದ ಕೈವಲ್ಯ ಪರಮಪುರುಷಾರ್ಥವಲ್ಲ. ಮತ್ತು ಪ್ರಕೃತಿಸಂಬಂಧವೇ ದೋಷವೂ ಅಲ್ಲ. ಬಂಧವೆಂಬುದು 'ಜೀವ' ನ ದೋಷಗಳಿಂದುಂಟಾದ ಅನೈಸರ್ಗಿಕಬ್ರಹ್ಮವಿಯೋಗ. ಸಾಂಖ್ಯರೂ ವಿಶಿಷ್ಟಾದ್ವೈತಿಗಳಂತೆ ಮೂರು ಪ್ರಮಾಣಗಳನ್ನು ಒಪ್ಪಿರುವರು.

ಯೋಗದರ್ಶನಕ್ಕೂ ಸಾಂಖ್ಯದರ್ಶನಕ್ಕೂ ಬಹಳ ಸಾಮೀಪ್ಯವಿದೆ. ಪ್ರಕೃತಿ, ಪುರುಷ, ಬಂಧ, ಮೋಕ್ಷ ಈ ತತ್ವಗಳ ಸ್ವರೂಪ ಎರಡು ದರ್ಶನಗಳಲ್ಲಿಯೂ ಒಂದೇ ಪ್ರಕಾರ ನಿರೂಪಿಸಲ್ಪಟ್ಟಿದೆ. ಆದರೆ ಒಂದಂಶದಲ್ಲಿ ಮಾತ್ರ ಭೇದವಿದೆ. ಯೋಗದರ್ಶನದಲ್ಲಿ ಈಶ್ವರತತ್ವವನ್ನು ಒಪ್ಪಿರುತ್ತಾರೆ. ಈಶ್ವರನು ಜಗತ್ತಿಗೆ ನಿಮಿತ್ತಕಾರಣನು. ಮೂಲಪ್ರಕೃತಿಯೇ ಉಪಾದಾನಕಾರಣ. ಸಾಂಖ್ಯರ ಮೇಲೆ ಎತ್ತಿರುವ ಆಕ್ಷೇಪಣೆಗಳೆಲ್ಲ ಈ ದರ್ಶನಕ್ಕೂ ಅನ್ವಯಿಸುವುದು. ಅಲ್ಲದೆ ಈಶ್ವರನ ವಿಚಾರವನ್ನು ಕುರಿತು ವಿಶೇಷ ನಿರಾಸವೂ ಮಾಡಲ್ಪಟ್ಟಿದೆ. ಯೋಗದರ್ಶನದ ಈಶ್ವರನು ಪ್ರಕೃತಿಯ ಆತ್ಮನಲ್ಲ. ಅವನು ಕೇವಲ ನಿಮಿತ್ತಕಾರಣನು. ಜೀವಾತ್ಮನಿಗೂ ಅವನು ಅಂತರಾತ್ಮನಲ್ಲ. ಆದುದರಿಂದ ಕೈವಲ್ಯ ಹೊಂದಿದ ಸಿದ್ಧನಿಗೆ ಅವನು ಬಾಹ್ಯವಸ್ತು. ಆದರೆ ರಾಮಾನುಜ ದರ್ಶನದಲ್ಲಿ "ಈಶ್ವರನೇ ಉಪಾದಾನ ಕಾರಣ; ಪ್ರಕೃತಿ ಅವನ ಶರೀರ; ಜೀವಾತ್ಮನೂ ಅವನ ಶರೀರ; ಮೋಕ್ಷಸಾಧಕ ಧ್ಯಾನದಲ್ಲಿ ಈಶ್ವರನ ಸರ್ವಾತ್ಮಕತೆಯನ್ನೂ ಮತ್ತು ಪುರುಷ ಪ್ರಕೃತಿಗಳು ಅವನ ವಿಭೂತಿಗಳೆಂಬ ಪರಮಾರ್ಥವನ್ನೂ ಅನುಸಂಧಾನಮಾಡಬೇಕು" ಎಂಬ ಪ್ರಮೇಯಾಂಶಗಳು ಯೋಗದರ್ಶನಕ್ಕೆ ವಿರುದ್ಧವಾಗಿವೆ. ಪಾತಂಜಲರು ಈಶ್ವರತತ್ವವನ್ನು ಒಪ್ಪಿದರೂ ತತ್ಪ್ರಾಪ್ತಿಯೇ ಮೋಕ್ಷವೆಂದು ಹೇಳುವುದಿಲ್ಲ. ವಿಶಿಷ್ಟಾದ್ವೈತದಲ್ಲಿ ಅದು ಒಂದು ಪ್ರಧಾನನಿರ್ಣಯ.

ಪಾಶುಪತ, ಶೈವ, ಕಾಲಾಮುಖ ಕಾಪಾಲರೆಂಬ ನಾಲ್ಕು ಶೈವ ಮತಗಳನ್ನು ರಾಮಾನುಜಾಚಾರ್ಯರು ಉದಾಹರಿಸಿರುತ್ತಾರೆ. ಪಾಶುಪತಮತ

ವನ್ನು ಶಂಕರಾಚಾರ್ಯರೂ ನಿರಾಕರಿಸಿದ್ದಾರೆ. ಈ ಸಂದರ್ಭದಲ್ಲಿ ಎತ್ತಿರುವ ಆಕ್ಷೇಪಣೆಗಳೇ ರಾಮಾನುಜಭಾಷ್ಯದಲ್ಲೂ ಉದ್ಧೃತವಾಗಿವೆ. ಈಶ್ವರನು ನಿಮಿತ್ತಕಾರಣ ಮಾತ್ರ, ಉಪಾದಾನ ಕಾರಣವಲ್ಲವೆಂದು ಪಾಶುಪತರು ಆ ಕಾಲದಲ್ಲಿ ವಾದಿಸಿದಂತೆ ಕಾಣುತ್ತದೆ.

ಪ್ರಪಂಚದಲ್ಲಿ ನಿಮಿತ್ತಕಾರಣರಾದ ಕುಂಭಕಾರಾದಿಗಳು ತಮ್ಮ ಶರೀರಗಳ ಮೂಲಕ ಉಪಾದಾನಕಾರಣವಾದ ಮಣ್ಣಿನಿಂದ ಕುಂಭವೇ ಮೊದಲಾದುವನ್ನು ಮಾಡುತ್ತಾರೆ. ಈಶ್ವರನಿಗೂ ಹಾಗೆ ಸಶರೀರತ್ವವನ್ನು ಅಂಗೀಕರಿಸದೆ ಹೋದರೆ ಅವನ ನಿಮಿತ್ತಕಾರಣತ್ವವು ಸಿದ್ಧಿಸುವುದಿಲ್ಲ. ಈಶ್ವರನಿಗೂ ಶರೀರ ಉಂಟೆಂದೇ ಹೇಳಿದರೆ ಆ ಶರೀರವು ನಿತ್ಯವೇ ಅಥವಾ ಕಾರ್ಯವೇ (ಮತ್ತಾವುದರಿಂದಲಾದರೂ ಹುಟ್ಟಿದ್ದೇ) ಎಂಬ ಶಂಕೆ ಬರುವುದು. ಕಾರ್ಯವೆಂದು ಹೇಳಿದರೆ ಅದಕ್ಕೆ ಉಪಾದಾನ ಮತ್ತು ನಿಮಿತ್ತಕಾರಣ ಆ ನಿಮಿತ್ತಕಾರಣದ ಶರೀರ ಇವುಗಳ ವಿಚಾರ ಕೊನೆಯಿಲ್ಲದಂತೆ ಪ್ರಸಕ್ತವಾಗುವುದು. ಇದು ಅನವಸ್ಥೆಯೆಂಬ ದೋಷಕ್ಕೆ ಅವಕಾಶ ಕೊಡುವುದು. ಈಶ್ವರನ ಶರೀರ ನಿತ್ಯವೆಂದು ಹೇಳಿದರೆ, ಅದರಂತೆ ಜಗತ್ತೂ ನಿತ್ಯವೆಂದು ವಾದಿಸಬಹುದು. ನಿತ್ಯಜಗತ್ತು ನಿಮಿತ್ತಕಾರಣವಾದ ಈಶ್ವರನನ್ನು ಅಪೇಕ್ಷಿಸುವುದೇ ಇಲ್ಲ. ಕಡೆಗೆ, ಶರೀರಾಂತರ ದ್ವಾರವಿಲ್ಲದೆ ಸಾಕ್ಷಾತ್ತಾಗಿ ಜೀವನು ತನ್ನ ಶರೀರದ ಆಧಿಪತ್ಯವನ್ನು ನಿರ್ವಹಿಸುವಂತೆ ಈಶ್ವರನೂ ಜಗದುಪಾದಾನಕಾರಣದ ಅಧಿಪತಿಯೆಂದೂ ಹೇಳಲಾಗುವುದಿಲ್ಲ. ಏಕೆಂದರೆ 'ಜೀವ'ನ ದೇಹ ಸಂಬಂಧ ಅತ್ಯಂತ ಸಾಕ್ಷಾತ್ತಾಗಿ ಅಲ್ಲ; ಕರ್ಮಮೂಲಕವಾದದ್ದು. ಈಶ್ವರನೂ ಕರ್ಮಾಧೀನನಾದರೆ ಅವನೂ ಅಲ್ಪಜ್ಞನೂ ಅಂತವಾ (ಎಂದರೆ ಕಡೆಯುಳ್ಳವನೂ) ಆಗಬೇಕಾಗಿ ಅವನ ಈಶ್ವರತ್ವಕ್ಕೇ ಲೋಪಬರುವುದು.

ಈಶ್ವರನಿಗೆ ಅಭಿನ್ನನಿಮಿತ್ತೋಪಾದಾನತ್ವ (ಎಂದರೆ ನಿಮಿತ್ತಕಾರಣ ಮತ್ತು ಉಪಾದಾನಕಾರಣ ಎರಡೂ ಒಂದೇ ಆಗುವಂತಹ ಕಾರಣತ್ವ) ವನ್ನು ಹೇಳುವ ಶ್ರೀಕಂಠಮತದಂತಹ ಶೈವ ಪಂಥವಾಗಲಿ, ನಿರುಪಾದಾನ ಕರ್ತೃತ್ವ (ಎಂದರೆ ಉಪಾದಾನಕಾರಣವಿಲ್ಲದೆ ಕರ್ತೃತ್ವವನ್ನು ಹೊಂದಿರುವಿಕೆ) ವನ್ನು ಹೇಳುವ ಪ್ರತ್ಯಭಿಜ್ಞಾದರ್ಶನವಾಗಲಿ, ಕರ್ಮನಿರಪೇಕ್ಷವಾಗಿ ಜಗನ್ನಿಯಮನವನ್ನು ಅವನಲ್ಲಿ ಆರೋಪಿಸುವ ನಕುಲೀಪಾಶುಪತದರ್ಶನವಾಗಲಿ ಶಂಕರ

ರಾಮಾನುಜರಿಗಿಂತ ಹಿಂದೆ ಪ್ರಸಿದ್ಧ ಇದ್ದಂತೆ ಕಾಣುವುದಿಲ್ಲ. ಆಚಾರ್ಯರ ವಿಮರ್ಶೆಯ ಫಲವಾಗಿ ಈ ಪರಿಷ್ಕಾರಗಳು ಹುಟ್ಟಿರಬೇಕೆಂದು ತೋರುತ್ತದೆ.

ಕಣಾದ ಮತ್ತು ಪ್ರಶಸ್ತಪಾದರು ಮುಂದಿಟ್ಟಿರುವ ವೈಶೇಷಿಕ ಮತವೂ ರಾಮಾನುಜ ಸಿದ್ಧಾಂತಕ್ಕೆ ಅನಾದರಣೀಯ. ಈ ಮತದಲ್ಲಿ ಕಾರ್ಯ ಕಾರಣದಿಂದ ಹೊಸದಾಗಿ ಹುಟ್ಟಿದ್ದು ; ಹಿಂದೆ ಇದ್ದದ್ದಲ್ಲ. ಕಾರಣ ದಲ್ಲಿ ಸೂಕ್ಷ್ಮವಾಗಿ ಕಾರ್ಯ ಅಡಗಿದೆಯೆಂಬ ಸಾಂಖ್ಯರ ವಾದ ಇವರಿಗೆ ಅಭಿ ಮತವಲ್ಲ. ಮತ್ತು ಸಾಂಖ್ಯರು ಜಗತ್ತಿನ ಅನೇಕಾನೇಕ ಪದಾರ್ಥಗಳೆಲ್ಲ ಒಂದೇ ಮೂಲ ಪ್ರಕೃತಿಯ ವಿಕಾರವೆಂದು ಹೇಳುವರು. ವೈಶೇಷಿಕದರ್ಶನ ದಲ್ಲಿ ಇದಕ್ಕೆ ವಿರುದ್ಧವಾಗಿ ಅನೇಕ ಅಣುಗಳ ಸಂಯೋಗದಿಂದ ಪ್ರಪಂಚದ ನಿರ್ಮಾಣವೆಂದು ಹೇಳಿದೆ. ಆದರೆ ಕಾರ್ಯಗುಣಗಳು ಕಾರಣಗುಣಪೂರ್ವ ಗಳು ಮತ್ತು ತದನುವೃತ್ತಿಗಳು ಎಂದೂ ಹೇಳಲಾಗಿದೆ. ಜೈನರು ಹೇಳುವಂತೆ ಎಲ್ಲ ಭೂತಗಳ ಅಣುಗಳೂ ಒಂದೇ ಸ್ವರೂಪವುಳ್ಳವೆಂದು ಹೇಳದೆ, ಆಯಾ ಭೂತಗಳು ಆಯಾ ಭೂತಗಳ ವಿಶೇಷಗುಣವುಳ್ಳ ಅಣುಗಳಿಂದ ನಿರ್ಮಿತ ವಾಗಿವೆಯೆಂದು ಇವರು ಹೇಳುವರು. ಈ ವಿಧವಾದ ಜಗತ್ತಿನ ಆರಂಭಕ್ಕೆ ಜೀವಾತ್ಮರ ಪುಣ್ಯಪಾಪರೂಪವಾದ ಅದೃಷ್ಟವು ನಿಯಾಮಕ. ಅದೃಷ್ಟಾನು ಸಾರವಾಗಿ ಅಣುಸಂಯೋಗಮಾಡಿ ಜಗದ್ರಚನೆ ನಡೆಸುವ ಈಶ್ವರನೆಂಬ ಸರ್ವಜ್ಞನಾದ ಆತ್ಮನನ್ನೂ ಇವರು ಒಪ್ಪುವರು.

ಈಗ, ಅಣುಗಳು ದೇಶಭೇದವನ್ನು ಹೊಂದಿವೆಯೋ, ಇಲ್ಲವೋ ? ಎಂಬ ಪ್ರಶ್ನೆ ಏಳುವುದು. ಇಲ್ಲವೆಂದಲ್ಲಿ, ಒಂದೇ ಪ್ರದೇಶದಲ್ಲಿ ಅನೇಕ ಅಣು ಗಳು ಇರುವುದು ಸಾಧ್ಯವಾದರೆ ಅಣುತ್ವವ್ಯತಿರಿಕ್ತಪರಿಮಾಣವುಳ್ಳ ಪದಾ ರ್ಥಗಳ ಉತ್ಪತ್ತಿ ಸಿದ್ಧಿಸುವುದಿಲ್ಲ. ಅಣುಗಳಿಗೆ ಪ್ರದೇಶಭೇದವಿದೆಯೆಂದು ಒಪ್ಪಿದರೆ ಸಾವಯವತ್ವವನ್ನೂ ಒಪ್ಪಬೇಕಾಗುವುದು. ಸಾವಯವಗಳಾದಲ್ಲಿ ಜಗತ್ತಿನಂತೆ ಅವೂ ಕಾರ್ಯಗಳೇ ಹೊರತು ಮೂಲಕಾರಣಗಳಲ್ಲ. ಏಕೆಂದರೆ ಸಾವಯವತ್ವದಿಂದಲೇ ಜಗತ್ಕಾರ್ಯತ್ವವನ್ನು ವೈಶೇಷಿಕರು ಸ್ಥಾಪಿಸುವರು. ಆತ್ಮಗತವಾದ ಅದೃಷ್ಟವು ಅಣುಗತವಾದ ಸಂಯೋಗಹೇತುಕರ್ಮಕ್ಕೆ ನಿಯಾಮಕವಾಗಲಾರದು. ಹಾಗಿದ್ದರೂ ಅದೃಷ್ಟಪ್ರವಾಹವು ನಿರಂತರವಾ ದುದರಿಂದ ಜಗತ್ಪ್ರವಾಹವೂ ನಿರಂತರವಾಗಿರಬೇಕು. ವೈಶೇಷಿಕರು ಹೇಳು

ವಂತೆ ಸೃಷ್ಟಿಪ್ರಳಯಗಳಿಗೆ ಅವಕಾಶವಿಲ್ಲ. ಇದಲ್ಲದೆ ಇವರು 'ಸಮವಾಯ' ವೆಂಬ ಒಂದು ಪದಾರ್ಥವನ್ನು ಒಪ್ಪುತ್ತಾರೆ. ಈ ಸಮವಾಯ (ಒಂದನ್ನೊಂದು ಎಡಬಿಡದೆ ಕೂಡಿರುವ ಎರಡು ಪದಾರ್ಥಗಳ ಸಂಬಂಧವಿಶೇಷ) ಕ್ಕೂ ಅದಕ್ಕೆ ಸುಬಂಧಿಸಿದ ವಸ್ತುಗಳಿಗೂ ಇರುವ ಸಂಬಂಧನಿರ್ವಾಹಕ್ಕೆ ಮತ್ತೊಂದು ಸಮವಾಯ ಸಂಬಂಧವೂ ಅದಕ್ಕೆ ಮತ್ತೊಂದು ಹೀಗೆ ಕಡೆಗೆ ಸಮವಾಯ ಅನವಸ್ಥೆ ಪರ್ಯವಸಾನವಾಗುವುದು. ಅನಿತ್ಯಪದಾರ್ಥಗಳೊಡನೆ ಸಮವಾಯದ ಮೂಲಕ ಸಂಬಂಧವು ಅಶಕ್ಯ. ಆದರೆ ಅದನ್ನೂ ಇವರು ಹೇಳುವರು. ಕಾರ್ಯಭೂತಗಳಲ್ಲಿರುವ ರೂಪಾದಿ ವಿಶೇಷಗುಣಗಳನ್ನು ಕಾರಣಾಣುಗಳಲ್ಲಿ ಹೇಳಿ, ಅವುಗಳ ಅನಿತ್ಯತ್ವ ಮತ್ತು ಕಾರ್ಯತ್ವಗಳನ್ನು ಮಾತ್ರ ಅಣುಗಳಲ್ಲಿ ನಿಷೇಧಿಸುವುದು ಅರ್ಧಜರತೀಯನ್ಯಾಯ. ಇನ್ನು ಆತ್ಮವಾದದ ವಿಚಾರ. ಚೈತನ್ಯವು ವೈಶೇಷಿಕಮತದಲ್ಲಿ ಆತ್ಮನ ಆಗಂತುಕಗುಣ; ವಿಶಿಷ್ಟಾದ್ವೈತದಲ್ಲಿ ಸ್ವರೂಪಸಿದ್ಧ. ಮುಕ್ತಾತ್ಮನು ಅಲ್ಲಿ ಅಚೇತನಕಲ್ಪ, ಮತ್ತು ದುಃಖಾಭಾವವೇ ಮೋಕ್ಷ. ಆದರೆ ಇಲ್ಲಿ ಪೂರ್ಣಜ್ಞಾನಾನಂದವಿಕಾಸವೇ ಮೋಕ್ಷವೆನಿಸಿಕೊಳ್ಳುವುದು. ಆತ್ಮನಾನಾತ್ವ, ಸಂಸಾರಾವಸ್ಥೆಯಲ್ಲಿ ಯಥಾರ್ಥ ಜ್ಞಾತೃತ್ವ, ಕರ್ತೃತ್ವ, ಭೋಕ್ತೃತ್ವಗಳನ್ನೂ ಎರಡು ಸಿದ್ಧಾಂತಗಳೂ ಒಪ್ಪುತ್ತವೆ. ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಇವು (ಕರ್ತೃತ್ವ, ಜ್ಞಾತೃತ್ವ ಮೊದಲಾದುವು) ಮೋಕ್ಷದಲ್ಲಿಯೂ ನಿರ್ದುಷ್ಟವಾಗಿ ಪ್ರಕಾಶಿಸುತ್ತವೆಂದು ನಿರ್ಣಯ.

ವೈಶೇಷಿಕ ಮತ್ತು ನೈಯಾಯಿಕ ಮತದವರು ಈಶ್ವರ ತತ್ತ್ವವನ್ನು ಅಂಗೀಕರಿಸುತ್ತಾರೆ. ವಾಚಸ್ಪತಿಮಿಶ್ರ ಮೊದಲಾದ ಕೆಲವರು ಈ ಮತದಲ್ಲಿ ಈಶ್ವರನು ಕೇವಲ ನಿಮಿತ್ತಕಾರಣನೆಂದು ವಾದಿಸಿದ್ದಾರೆ. ಈಶ್ವರನು ಶ್ರುತಿ ಪ್ರಮಾಣದಿಂದಲೇ ಸಿದ್ಧಿಸುವ ತತ್ತ್ವವಲ್ಲ. ಅನುಮಾನ (Inference) ದಿಂದಲೂ ಈಶ್ವರಾಸ್ತಿತ್ವವನ್ನು ಸಾಧಿಸಬಹುದೆಂದು ಇವರ ಅಭಿಪ್ರಾಯ.

ಈ ಎರಡು ಅಂಶಗಳನ್ನೂ ರಾಮಾನುಜಾಚಾರ್ಯರು ವಿರೋಧಿಸಿದ್ದಾರೆ. ಸೇಶ್ವರದರ್ಶನದಂತೆಯೇ ನಿಮಿತ್ತಮಾತ್ರೇಶ್ವರವಾದವೂ ಅಸಾಧುವೆಂದೇ ಇವರ ನಿರ್ಣಯ. ಯೋಗ ಮತ್ತು ಪಾಶುಪತದರ್ಶನಗಳ ವಿಷಯದಲ್ಲಿ ಹೇಳಿದ ದೋಷಗಳು ಇಲ್ಲೂ ಇವೆ. ರಾಮಾನುಜ ಮತದಲ್ಲಿ, ಉಪನಿಷತ್ತು

ಗಳೇ ಈಶ್ವರಪ್ರಮೇಯಸಾಧಕಗಳು. ಲೋಕಾನುಭವದಿಂದ ಈಶ್ವರವಾದಕ್ಕೆ ಬಾಧವಿಲ್ಲದಿದ್ದರೂ ಅದರ ಆಧಾರದಿಂದಲೇ ಅವನನ್ನು ಸ್ಥಾಪಿಸುವುದು ಅಸಾಧ್ಯ. ಆದುದರಿಂದಲೇ ಶ್ರುತಿಯು ಈ ವಿಷಯದಲ್ಲಿ ಮುಖ್ಯ ಪ್ರಮಾಣ. ನ್ಯಾಯ ವೈಶೇಷಿಕರು ಪರತಃ ಪ್ರಮಾಣ್ಯವನ್ನು ಒಪ್ಪುವವರು. ಆದುದರಿಂದ ಅವರು ವೇದೋಕ್ತವಾದ ಈಶ್ವರತತ್ವವನ್ನು ಒಪ್ಪಿದರೂ, ಅದರ ಪ್ರಾಮಾಣ್ಯ ಸಾಧನೆಗೆ ಲೌಕಿಕನ್ಯಾಯದ ಸಂವಾದವನ್ನು ಹೇಳಬೇಕಾಯಿತು. ವೇದಾಂತ ದಲ್ಲಿ ಪ್ರಾಮಾಣ್ಯ ಸ್ವತಃಸಿದ್ಧ. ಬಾಧವಿಲ್ಲದ ಜ್ಞಾನವೆಲ್ಲ ಯಥಾರ್ಥ. ಶ್ರುತಿಜನ್ಯವಾದ ಜ್ಞಾನದ ಅರ್ಥವೇ ಅನುಮಾನಜನ್ಯವೂ ಆದರೆ, ಆಗ ಎರಡರಲ್ಲಿ ಒಂದು ಅನುವಾದವಾಗುವುದು. ಮತ್ತೊಂದು ಈ ಅನುವಾದ ದಿಂದ ಸಮರ್ಥನೀಯವಾದರೆ ಅದರ ಸ್ವತಃಪ್ರಾಮಾಣ್ಯಕ್ಕೆ ಧಕ್ಕೆ ಬರುವುದು. ಆದುದರಿಂದ ಈ ಎರಡರಲ್ಲಿ ಯಾವುದೂ ಅನುವಾದವಲ್ಲದೆ ಇರಬೇಕಾದರೆ ಮತ್ತು ಈಶ್ವರವಿಷಯಕಪ್ರಮಾಣ ಸ್ವತಃಸಿದ್ಧವಾಗಬೇಕಾ ದರೆ ಒಂದೇ ಒಂದನ್ನು ಈಶ್ವರಪ್ರತಿಪಾದಕವನ್ನಾಗಿ ಒಪ್ಪಬೇಕು. ಈಶ್ವರನು ಅತೀಂದ್ರಿಯನಾದುದರಿಂದಲೂ, ಅನುಮಾನಗಳೆಲ್ಲ ಇಂದ್ರಿಯಪ್ರತ್ಯಕ್ಷದ ಮೇಲೆ ನಿಂತಿರುವುದರಿಂದಲೂ ಶ್ರುತಿಮಾತ್ರವೇ ಪ್ರಮಾಣವೆಂದು ಒಪ್ಪಬೇಕು. ಮತ್ತೊಂದು ವಿಧದಲ್ಲಿ ತರ್ಕವು ಈಶ್ವರವಾದಕ್ಕೆ ಸಮರ್ಥನಾರೂಪವಾಗಿದೆ. ಶ್ರುತಿಪ್ರತಿಪಾದಿತವಾದ ಈಶ್ವರವಾದವನ್ನು ನಿರಾಕರಿಸಿದರೆ ಸಮಂಜಸವಾದ ಮತ್ತು ಅಬಾಧಿತವಾದ ತತ್ವವ್ಯವಸ್ಥೆಯೇ ಅಸಾಧ್ಯವೆಂದು ತರ್ಕವು ಸಾಧಿಸು ತ್ತದೆ. ಈಶ್ವರನಿಗೂ ಜಗತ್ತಿಗೂ ಆತ್ಮ ಶರೀರಭಾವವನ್ನು ನ್ಯಾಯ ವೈಶೇಷಿ ಕರು ಒಪ್ಪುವುದಿಲ್ಲ. ಕಾಲ, ದಿಕ್ಕು ಆಕಾಶ ಈ ಪದಾರ್ಥಗಳು ಭೋಕ್ತೃ ಪುರುಷರ ಅದೃಷ್ಟ ಪ್ರೇರಣದಿಂದ ಶಬ್ದಾದಿ ಗುಣಗಳ ಉತ್ಪತ್ತಿಯಲ್ಲಿ ಈಶ್ವರ ನನ್ನು ಅಪೇಕ್ಷಿಸುವುದೇ ಹೊರತು ಸ್ವರೂಪತಃ ಅಲ್ಲ. ಚೇತನರೂ ಅದೃ ಷ್ಟಾನುಗುಣವಾಗಿ ದೇಹೇಂದ್ರಿಯಸಂಯೋಜನದ ಮೂಲಕ ಸುಖ-ದುಃಖ ಜ್ಞಾನಾದಿಗಳ ಪ್ರಾಪ್ತಿಯಲ್ಲಿ ಈಶ್ವರಾಧೀನರೇ ವಿನಾ ಸ್ವರೂಪಸ್ಥಿತಿಯಲ್ಲಿಲ್ಲ. ಮುಖ್ಯ ವ್ಯವಸ್ಥೆಯಲ್ಲಂತೂ ಈಶ್ವರಾಪೇಕ್ಷೆಯೇ ಇಲ್ಲ. ಆದುದರಿಂದ ಜಗತ್ತು ಯಾವದ್ದ್ರವ್ಯಭಾವಿಯಾಗಿ ಈಶ್ವರಧಾರ್ಯವೂ ನಿಯಾಮ್ಯವೂ ಅಲ್ಲ.

ಈಶ್ವರನಿಗೆ ಅಸಂಕುಚಿತ ಈಶ್ವರತ್ವವನ್ನು ನ್ಯಾಯವೈಶೇಷಿಕರು ಹೇಳಿಲ್ಲವೆಂದು ರಾಮಾನುಜರ ಮತ.

ಯಥಾರ್ಥವಾದ ಮೀಮಾಂಸಕ ಮತವು ವೇದಾಂತದ ಪೂರ್ವಭಾವಿ ಅಂಶವೆಂಬ ಸಿದ್ಧಾಂತವಾದುದರಿಂದ ರಾಮಾನುಜರು ವಿರೋಧಿಸುವ ಮೀಮಾಂಸಕರೆಲ್ಲ ಅಪವ್ಯಾಖ್ಯಾತೃಗಳೆಂದು ಅಭಿಪ್ರಾಯ. ಮೀಮಾಂಸಕರು ಸ್ವತಃ ಪ್ರಾಮಾಣ್ಯವಾದಿಗಳು ಮತ್ತು ವೇದವನ್ನು ಅಪೌರುಷೇಯವೆಂದು ಹೇಳುವವರು. ಈ ಎರಡು ನಿರ್ಣಯಗಳೂ ರಾಮಾನುಜ ಸಮ್ಮತ. ಆದರೆ ಕೆಲವು ಪೂರ್ವಮೀಮಾಂಸಕರು ಮಾತ್ರ ನಿರೀಶ್ವರವಾದವನ್ನೂ, ಕರ್ಮವು ಸ್ವತಃ ಫಲಪ್ರದವೆಂಬ ವಾದವನ್ನೂ, ಮೋಕ್ಷವೆಂದರೆ ಆತ್ಮನು ತನ್ನ ನಿಜರೂಪದಿಂದಿರುವಿಕೆ ಎಂಬುದನ್ನೂ ಪ್ರತಿಪಾದಿಸುತ್ತಾರೆ. ಮೋಕ್ಷಸಾಧನವು ಈಶ್ವರ ಜ್ಞಾನವಾಗಲಿ, ಭಕ್ತಿಯೆನಿಸಿಕೊಳ್ಳುವ ಉಪಾಸನೆಯಾಗಲಿ ಅಲ್ಲವೆಂದೂ ಹೇಳಲಾಗಿದೆ. ವೇದದಿಂದ ವಿಧಿಪ್ರತಿಷೇಧರೂಪವಾದ ಕಾರ್ಯೋಪದೇಶವಾಗುವುದೇ ವಿನಾ ಸಿದ್ಧತತ್ವವಾದ ಈಶ್ವರನ ಉಪದೇಶವಲ್ಲವೆಂದೂ ಪ್ರಭಾಕರರ ಮತ. ಇವೆಲ್ಲ ಯಥಾರ್ಥವಾದ ಪೂರ್ವಮೀಮಾಂಸಾಶಾಸ್ತ್ರದ ಅಭಿಪ್ರಾಯಗಳಲ್ಲವೆಂದೂ ವ್ಯಾಖ್ಯಾತೃದೋಷದಿಂದ ಹುಟ್ಟಿದ ಕಲ್ಪನೆಗಳೆಂದೂ ರಾಮಾನುಜ ಸಿದ್ಧಾಂತದ ಸಮಾಧಾನ. ಇತರ ದರ್ಶನಗಳ ವಿಮರ್ಶೆಯಲ್ಲಿಯೂ ಮತ್ತು ಆತ್ಮಸ್ವರೂಪ ಮತ್ತು ಜಗತ್ಸ್ವರೂಪ ಇವುಗಳ ನಿರೂಪಣೆಯಲ್ಲಿಯೂ ಪೂರ್ವಮೀಮಾಂಸಕರಿಂದ ವಿಶಿಷ್ಟಾದ್ವೈತಕ್ಕೆ ಬಹಳ ಉಪಕಾರವಾಗಿದೆ.

ಕಡೆಯದಾಗಿ, ರಾಮಾನುಜದರ್ಶನಕ್ಕೆ ಹಿನ್ನೆಲೆಯಾಗಿ ಅವರ ಗ್ರಂಥಗಳಲ್ಲಿ ವಿಶದವಾಗಿ ಪರೀಕ್ಷಿಸಲ್ಪಟ್ಟಿರುವ ದರ್ಶನವೆಂದರೆ ಅದ್ವೈತವೇದಾಂತ ಸಿದ್ಧಾಂತದ ಪ್ರತಿಯೊಂದು ಗ್ರಂಥದಲ್ಲಿಯೂ ಅದ್ವೈತದ ವಿವರಣೆ ಮತ್ತು ಖಂಡನೆಗಳು ಕಂಡುಬರುತ್ತವೆ. ವಿಶಿಷ್ಟಾದ್ವೈತಕ್ಕೆ ಸಾಕ್ಷಾತ್ಪೂರ್ವಪಕ್ಷವೆಂದರೆ ಈ ದರ್ಶನ. ಬ್ರಹ್ಮ, ಆತ್ಮ, ಸಾಧನ, ಫಲ, ಪ್ರಮಾಣ ಈ ಎಲ್ಲ ವಿಷಯಗಳಲ್ಲಿಯೂ ಬಹಳ ಸೂಕ್ಷ್ಮವಾದ ಚರ್ಚೆ ಬೆಳೆದಿದೆ. ಅದರ ಸಂಗ್ರಹ ಮಾತ್ರ ಇಲ್ಲಿ ಸಾಧ್ಯ.

ಮುಖ್ಯವಾಗಿ ಅದ್ವೈತವು ಅಭೇದವಾದ. ಭೇದವೆಂಬ ವಸ್ತು ಪರಮಾರ್ಥವಲ್ಲ. ನಿರ್ವಿಶೇಷತತ್ವ ಪರಮಾರ್ಥ. ಭೇದದೊಡನೆ ಅದನ್ನೂ

ನಿರಾಕರಿಸುವುದು ಅಯುಕ್ತ. ಆಧಾರವಿಲ್ಲದೆ ಭ್ರಮೆ ಇಲ್ಲ. ಆದುದರಿಂದ ಭೇದಭ್ರಮೆಗೆ ಆಧಾರ ಆವಶ್ಯಕ. ಆ ಆಧಾರ ಸನ್ಮಾತ್ರರೂಪ. ಅದರಲ್ಲಿ ವಿಕಾರ, ಗುಣ, ಅವಯವ ಎಂಬ ಕಲ್ಪನೆಗಳಿಗೆ ಅವಕಾಶವಿಲ್ಲ. ಈ ಸದ್ವಸ್ತುವೇ ಚೈತನ್ಯ. ಅದು ಸ್ವತಃ ಸಿದ್ಧ; ನಿರಾಕರಣೆಗೆ ಸಿಲುಕದ ತತ್ವ. ನಿರಾಕರಣೆಯೂ ಚೈತನ್ಯದ ಮೂಲಕ ನಡೆಸಬೇಕಾದ ವ್ಯಾಪಾರ ಸ್ವತಃಸಿದ್ಧವಾದುದರಿಂದಲೇ ಚೈತನ್ಯವು ಸರ್ವದಾ ವರ್ತಮಾನರೂಪ ಮತ್ತು ಕಾಲಾತೀತ. ಚೈತನ್ಯವೇ ಆತ್ಮ; 'ಆತ್ಮ' ನಿರ್ವಿಕಾರವಾದುದರಿಂದಲೆ, ವಿಕಾರಾಸ್ಪದವಾದ 'ಅಹಂ' ಎಂದು ತೋರುವ ಅಂತಃಕರಣವು ಅದಕ್ಕೆ ವ್ಯತಿರಿಕ್ತವಾದದ್ದು. ಆತ್ಮಗಳು ಅನೇಕವೆಂಬ ಪ್ರತೀತಿಗೆ ಸುಖದುಃಖ ಜ್ಞಾನಾಜ್ಞಾನಾದಿಗಳ ವ್ಯವಸ್ಥೆ ಮೂಲ. ಆದರೆ ನಿರ್ವಿಕಾರ ಚೈತನ್ಯಕ್ಕೆ ಕರ್ತೃತ್ವಭೋಕ್ತೃತ್ವಜ್ಞಾತೃತ್ವಾದಿಗಳಿಲ್ಲದಿರುವುದರಿಂದ ಸುಖದುಃಖಾದಿಗಳ ವ್ಯವಸ್ಥೆಯಿಂದ ಅವುಗಳು ಆಶ್ರಯಿಸಿರುವ ಅಂತಃಕರಣ ಬಹುತ್ವವು ಸಿದ್ಧಿಸುವುದೇ ವಿನಾ ಆತ್ಮಬಹುತ್ವವಲ್ಲ. ಭೇದವಿಲ್ಲದ ಈ ಸದ್ವಸ್ತುವಿನಲ್ಲಿ ಇದೆಯೆಂದಾಗಲಿ ಇಲ್ಲವೆಂದಾಗಲಿ ಹೇಳುವುದಕ್ಕೆ ಸಾಧ್ಯವಾಗದ ಜ್ಞಾತೃಜ್ಞಾನಜ್ಞೇಯ ಭೇದಗಳು ಕಲ್ಪಿತವಾಗಿವೆ. ಈ ಕಲ್ಪನೆಯೇ ಸಂಸಾರ ಮೂಲ. ಇದನ್ನು ಹೋಗಲಾಡಿಸುವುದರಿಂದ ಜ್ಞಾನವು ಮೋಕ್ಷಸಿದ್ಧಿಯನ್ನುಂಟುಮಾಡುವುದು. ಈ ಕಲ್ಪನೆಗೆ ಕಾರಣ ಅನಾದಿ, ಭಾವರೂಪ, ಜ್ಞಾನದಿಂದ ಹೋಗತಕ್ಕುದು,ಮತ್ತು ಸದಸದ್ವಿಲಕ್ಷಣವಾದ (ಇದೆಯೆಂದಾಗಲಿ ಇಲ್ಲವೆಂದಾಗಲಿ ಹೇಳುವುದಕ್ಕಾಗದ ಬೇರೆ ಒಂದು ತತ್ವ) ಅಜ್ಞಾನ ಅಥವಾ ಅವಿದ್ಯೆ. ಸಂಸಾರ ಅವಿದ್ಯಾನಿರ್ಮಿತವಾದುದರಿಂದ ಮೋಕ್ಷಕ್ಕೆ ವಿದ್ಯೆಯೇ ಉಪಾಯ. ಕರ್ಮವು ವಿದ್ಯೆಗೆ ಸಾಧಕವಾಗಿರಬಹುದು, ಮೋಕ್ಷಕ್ಕಲ್ಲ. ವಿದ್ಯೆಯೆಂಬುದೂ ಪ್ರಮಾಣಜನ್ಯಜ್ಞಾನವೇ ಹೊರತು ಉಪಾಸನಾತ್ಮಕವಲ್ಲ. ಪ್ರಮಾಣಗಳಲ್ಲಿ ವೇದ ಮುಖ್ಯ. ಇತರ ಪ್ರಮಾಣಗಳು ಅದಕ್ಕೆ ವಿರುದ್ಧವಾದಾಗ ದುರ್ಬಲಗಳು. ಆದಕೆ ವಾಸ್ತವವಾಗಿ ವಿರೋಧವೇ ಇಲ್ಲ. ವೇದದಲ್ಲಿ ಜ್ಞಾನಕಾಂಡ ಪ್ರಧಾನ. ಅದರಲ್ಲೂ ನಿರ್ಗುಣ ನಿಷ್ಪ್ರಪಂಚ ಬ್ರಹ್ಮಪ್ರತಿಪಾದಕವಾದ ಉಪನಿಷದ್ಭಾಗಗಳೇ ಪರಮಪ್ರಮಾಣಗಳು. ಪ್ರಮಾಣವೆಂಬುದು ಪ್ರಪಂಚಾಂತರ್ಗತವಾಗಿದ್ದರೂ, ಅಸತ್ಯವಾದರೂ ಬ್ರಹ್ಮನ ಸತ್ಯತ್ವಕ್ಕೆ ಅಡಿಯಿದ ತೊಂದರೆಯಿಲ್ಲ. ಅಸದುಪಾಯದಿಂದ (ಎಂದರೆ ಅಸತ್ಯವಾದ ಉಪಾಯದಿಂದ) ಸತ್ಸಿದ್ಧಿ ಸಾಧ್ಯ. ಹೀಗೆಂದು ಅದ್ವೈತಮತದ ಸಾರಾಂಶ.

ಇವನ್ನು ರಾಮಾನುಜಾಚಾರ್ಯರು ಈ ರೀತಿ ಖಂಡಿಸಿರುತ್ತಾರೆ:— ಭೇದವೆಂಬುದು ಸರ್ವಪ್ರಮಾಣಸಿದ್ಧ. ನಿರ್ವಿಶೇಷತತ್ತ್ವಕ್ಕೆ ಯಾವ ಪ್ರಮಾಣವೂ ಇಲ್ಲ. ಭೇದಭ್ರಮೆಗೆ ಸತ್ಯವಾದ ಆಧಾರ ಬೇಕಿಲ್ಲ. ಅಸತ್ಯವಾದ ದೋಷವು ಭ್ರಮೆಗೆ ಕಾರಣವಾಗುವಂತೆ, ಅಸತ್ಯ ಆಧಾರವೂ ಆ ಭ್ರಮೆಗೆ ಸಾಕು. ಭ್ರಮೆಗೆ ಆಧಾರವಾದ ವಸ್ತುವಿನಲ್ಲೂ ಭ್ರಮೆಯ ಕಾಲದಲ್ಲಿ ಮತ್ತು ಅನಂತರ ಬಾಧಕಾಲದಲ್ಲಿ ಪ್ರತಿಭಾಸವಾಗುವ ಅಂಶದ್ವಯವಿರಬೇಕಾದುದರಿಂದ ನಿರ್ವಿಶೇಷತ್ವ ಅಥವಾ ನಿರವಯವತ್ವವು ಅಸಂಭವ. ಚೈತನ್ಯವು ಸ್ವತಃಸಿದ್ಧವಾದರೂ ಪರತಃಸಿದ್ಧವೂ ಹೌದು. ಅದರ ನಿರಾಕರಣೆ ಪರತಃ ಸಾಧ್ಯ. ಆದುದರಿಂದಲೇ ಅದು ಸರ್ವದಾ ವರ್ತಮಾನ ರೂಪವಾಗಿರಬೇಕಾಗಿಲ್ಲ. ವಿಕಾರಾಸ್ಪದತ್ವ ಚೈತನ್ಯದಲ್ಲೂ ಇರುವುದರಿಂದ, ಅದರ ನಿತ್ಯತ್ವವನ್ನು ಸ್ಥಾಪಿಸುವುದಕ್ಕಾಗಿ ಆತ್ಮತತ್ತ್ವವು ತದ್ವ್ಯತಿರಿಕ್ತವೆನ್ನಬೇಕು. ಆತ್ಮನು 'ಅಹಂ' ತತ್ತ್ವವಲ್ಲ ಎನ್ನುವುದರಿಂದ ಆತ್ಮನ ಸ್ವತಃಸಿದ್ಧತೆಯನ್ನು ಬಿಡಬೇಕಾಗುವುದು. 'ಆತ್ಮ' ಚೈತನ್ಯಸ್ವರೂಪವೂ ಹೌದು; ಚೈತನ್ಯಗುಣಕವೂ ಆಗಿರುವುದು. ಅದು ಸ್ವರೂಪತಃ ನಿರ್ವಿಕಾರ; ಗುಣತಃ ಸವಿಕಾರ. ಕ್ರಿಯಾರೂಪಗಳಾದ ಜ್ಞಾತೃತ್ವ ಕರ್ತೃತ್ವ ಭೋಕ್ತೃತ್ವಗಳು ಆತ್ಮನ ನೈಜಧರ್ಮಗಳಾದುದರಿಂದ ಆತ್ಮಬಹುತ್ವವು ಸ್ಥಾಪಿತವಾಗುತ್ತದೆ. ಜ್ಞಾನವು ಸದಾಕಾರವೋ ಅಸದಾಕಾರವೋ ಆಗಿದೆ. ಅದಕ್ಕೆ ಸದಸದ್ವಿಲಕ್ಷಣವಾದ ಪದಾರ್ಥವು ವಿಷಯವೆಂದರೂ ಯಾವ ಸ್ವರೂಪದ ಜ್ಞಾನಕ್ಕೆ ಮತ್ತಾವ ಸ್ವರೂಪದ ಪದಾರ್ಥವು ವಿಷಯವೆಂದರೂ ಅನುಪಪತ್ತಿ ಇಲ್ಲವೆಂದು ಹೇಳಿದಂತಾಗುವುದು. ಪ್ರತೀತಿಯಿಂದ ಸ್ಥಾಪಿಸಲ್ಪಡುವ ಆಕಾರಕ್ಕೂ ವಸ್ತುವಿನ ಯಥಾವತ್ತಾದ ಆಕಾರಕ್ಕೂ ವೈಲಕ್ಷಣ್ಯವಿರಬಹುದೆಂದರೆ ಎಲ್ಲ ಪದಾರ್ಥಗಳೂ ಎಲ್ಲ ಜ್ಞಾನಕ್ಕೂ ವಿಷಯಗಳಾಗಬೇಕು. ಅವಿದ್ಯಾಕಲ್ಪನೆಗೆ ಸ್ವಲ್ಪವೂ ಉಪಪತ್ತಿಯಿಲ್ಲ. ಅವಿದ್ಯೆ ಬ್ರಹ್ಮಾಶ್ರಯವೇ ಜೀವಾಶ್ರಯವೇ ಎಂದು ಹೇಳದ ಹೊರತು ಅದರ ಕಲ್ಪನೆಗೆ ಅವಕಾಶವಿಲ್ಲ. 'ಬ್ರಹ್ಮ' ದೂಷಿತವಾಗಬೇಕು ಅಥವಾ ಅವಿದ್ಯೆಗೂ ಪೂರ್ವದಲ್ಲಿ ಜೀವತ್ವವಿರಬೇಕು. ಹಾಗಿದ್ದರೆ ಅವಿದ್ಯಾಕಲ್ಪನೆ ವ್ಯರ್ಥ. ಹೀಗೆಯೇ ಅದರ ಸ್ವರೂಪ, ಬ್ರಹ್ಮರೂಪವನ್ನು ಮರೆಮಾಚುವ ಕೆಲಸ, ಅನಿರ್ವಚನೀಯತ್ವ, ಅದಕ್ಕೆ ಪ್ರಮಾಣಗಳು, ಅದರ

ನಿವೃತ್ತಿ ಮತ್ತು ನಿವರ್ತಕ ಇವುಗಳ ವಿಷಯದಲ್ಲಿ ಅನೇಕ ತರ್ಕಾಭಾಸಗಳೂ ವಿರೋಧಗಳೂ ಇವೆ. ಸಂಸಾರವು ಅವಿದ್ಯಾ ನಿರ್ಮಿತವಲ್ಲದುದರಿಂದಲೇ ಕರ್ಮವೂ ನಿರುತರ ಉಪಾಯದಲ್ಲಿ ಸೇರಿದ್ದೆಂದು ಹೇಳಬೇಕು. ಮೋಕ್ಷಸಾಧನ ಜ್ಞಾನ ಕೇವಲ ಪ್ರಮಾಣಜನ್ಯ ಜ್ಞಾನವಲ್ಲ. ಪ್ರೇಮ ಪೂರ್ಣವಾದ, ಪ್ರತ್ಯಕ್ಷತ್ವವನ್ನು ಹೊಂದಿದ ಭಕ್ತಿಯೆಂಬ ಉಪಾಸನೆಯೇ ಮೋಕ್ಷಸಾಧನ. ವೇದಕ್ಕೂ ಅನುಭವಕ್ಕೂ ವಿರೋಧವಿದ್ದಾಗ ಅನುಭವ ಪ್ರಬಲ, ವೇದವಲ್ಲ. ವೇದಕ್ಕೆ ಅದ್ವೈತಾರ್ಥವನ್ನು ಹೇಳಿದರೆ ಆ ರೀತಿ ವಿರೋಧಗಳು ಅನೇಕ ರೂಪದಲ್ಲಿ ಉಂಟಾಗುತ್ತವೆ. ವೇದದಲ್ಲಿ ಜ್ಞಾನಕಾಂಡ ಪ್ರಧಾನವಾದರೂ ಅದು ನಿರ್ಗುಣ ನಿಷ್ಪ್ರಪಂಚ ಬ್ರಹ್ಮವಾದವನ್ನು ಸ್ಥಾಪಿಸುವುದಿಲ್ಲ. ಆ ರೀತಿ ವ್ಯಾಖ್ಯಾನ ಮಾಡುವುದು ಅಶುದ್ಧ ಮತ್ತು ಅನ್ಯಾಯ ಮೂಲ. ಅಸತ್ಯವಾದ ಉಪಾಯದಿಂದ ಸತ್ಯವಾದ ಪ್ರಮೇಯದ ಸಿದ್ಧಿ ಎಂದಿಗೂ ಸಾಧ್ಯವಿಲ್ಲ. ಆದುದರಿಂದ ಅಸತ್ಯವೆಂದು ಹೇಳಲಾಗಿರುವ ಉಪನಿಷತ್ಪ್ರಮಾಣಗಳಿಂದ ನಿಷ್ಪ್ರಪಂಚ ಬ್ರಹ್ಮ ಸಾಧಿತವಾಗುವುದಿಲ್ಲ. ಪ್ರಮಾಣಗಳು ಸತ್ಯವಾಗಬೇಕು. ಇಲ್ಲದಿದ್ದರೆ ಬ್ರಹ್ಮ ಅಸತ್ಯವಾಗಬೇಕು. ಜ್ಞಾನಕ್ಕೆ ವಿಷಯ ಸತ್ವವಿಲ್ಲದೆ ಸ್ವರೂಪ ಸತ್ವವಿರಬಹುದು. ಆದರೆ ಸ್ವರೂಪ ಸತ್ವವಿಲ್ಲದೆ ವಿಷಯ ಸತ್ಯತ್ವ ಇರಲಾರದು. ಪ್ರಮಾಣಗಳು ಅಸತ್ತಾಗಿರಬಹುದೆನ್ನುವವರು ಶೂನ್ಯವಾದವನ್ನು ನಿರಾಕರಿಸುವುದು ಅಶಕ್ಯ ಮತ್ತು ವಿರುದ್ಧ.

ಹೀಗೆ ಈ ವಿಚಾರಗಳು ಮಹತ್ವಪೂರ್ಣವಾಗಿಯೂ ಅತಿ ಸೂಕ್ಷ್ಮ ವಿಮರ್ಶಾತ್ಮಕವಾಗಿಯೂ ವಿಸ್ತಾರವಾಗಿಯೂ ನಡೆದುಬಂದಿವೆ. ಪರಸ್ಪರ ವಿವಾದಗಳು ಹೀಗಿದ್ದರೂ ಇತರ ದರ್ಶನಗಳ ಖಂಡನೆಯಲ್ಲಿ ರಾಮಾನುಜಾಚಾರ್ಯರು ಬಹುಮಟ್ಟಿಗೆ ಶಾಂಕರ ಪದ್ಧತಿಯನ್ನು ಅನುಸರಿಸಿದ್ದಾರೆ. ಶಾಂಕರ ಸಿದ್ಧಾಂತದಲ್ಲಿ ವ್ಯವಹಾರ ಮಾರ್ಗದಿಂದ ಸಗುಣಬ್ರಹ್ಮವಿಷಯವಾಗಿ ಹೇಳಲ್ಪಟ್ಟಿರುವ ಅನೇಕ ತತ್ವಗಳು ರಾಮಾನುಜಮತದ ಪೂರ್ವನಿರ್ದೇಶಗಳಂತಿವೆ. ಶಂಕರಾಚಾರ್ಯರ ಪರಮಾರ್ಥ ದೃಷ್ಟಿ ಮಾತ್ರ ಬೌದ್ಧ ಸಾಂಖ್ಯಸಾಂಕರ್ಯದಿಂದುಂಟಾದ ದರ್ಶನ ದೋಷವೆಂದು ರಾಮಾನುಜಾಚಾರ್ಯರ ಅಭಿಪ್ರಾಯ. ಬ್ರಹ್ಮಸಾರವು, ಬ್ರಹ್ಮಪ್ರಾಪ್ತಿಯೇ ಮೋಕ್ಷ, ಬ್ರಹ್ಮಜ್ಞಾನವೇ

ಮೋಕ್ಷಸಾಧನವೆಂಬ ತತ್ವಗಳು ಇಬ್ಬರಿಗೂ ಸಮಾಧಾನ. ಆದರೆ ಅವುಗಳ ಸ್ವರೂಪ ನಿರೂಪಣೆಯ ಬಗ್ಗೆ ಭಿನ್ನಾಭಿಪ್ರಾಯವಿದೆ.

ಇದುವರೆಗಿನ, ತುಲನಾತ್ಮಕ ವಿಮರ್ಶೆಯು ಮುಂದೆ ಬರಲಿರುವ ಸಿದ್ಧಾಂತದ ಸ್ವರೂಪ ಪ್ರತಿಪಾದನೆಯಿಂದ ಪೌಷ್ಕಲ್ಯವನ್ನು ಹೊಂದುವುದು ಇತರ ದರ್ಶನಗಳ ಯಾವ ಯಾವ ಅಂಶಗಳು ಖಂಡಿಸಲ್ಪಟ್ಟವೆ; ಯಾವುವು ಸ್ವಸಿದ್ಧಾಂತಕ್ಕೆ ಉಪೋದ್ಬಲಕವಾಗಿ ಉಪಯೋಗಿಸಲ್ಪಟ್ಟವೆ. ಅದು ಹೇಗೆ ನಡೆದಿದೆ ಎಂಬೀ ವಿಚಾರಗಳು ಗಮನಾರ್ಹ. ಇಂತಹ ವಿವೇಚನೆಯೇ ದರ್ಶನಗಳ ಇತಿಹಾಸ ಪರಿಶೀಲನೆಯಿಂದ ಉಂಟಾಗುವ ಪರಮ ಪ್ರಯೋಜನವೆಂದು ಹೇಳಬಹುದು.

---

# ಸಿದ್ಧಾಂತದ ಸ್ವರೂಪ

ಜಗತ್ತಿನಲ್ಲಿ ಸರ್ವಪ್ರಾಣಿಗಳಿಗೂ ಸುಖಾಪೇಕ್ಷೆಯೂ ದುಃಖನಿರಪೇಕ್ಷೆಯೂ ಸ್ವಭಾವಸಿದ್ಧವೆಂಬುದು ನಿರ್ವಿವಾದವಾದ ವಿಷಯ. ಆದರೆ ಈ ಸುಖ ದುಃಖಗಳ ಸ್ವರೂಪ, ಪ್ರಾಪ್ತಿ ಅಥವಾ ವಾರಣೋಪಾಯ ಇವೇ ಮೊದಲಾದ ಕೆಲವು ವಿಚಾರಗಳಲ್ಲಿ ಬಹಳಮಟ್ಟಿನ ವಿಪ್ರತಿಪತ್ತಿಗಳು ಕಂಡು ಬರುತ್ತವೆ. ನಮ್ಮ ಪ್ರಾಪಂಚಿಕ ವ್ಯವಹಾರದಲ್ಲಿ ಎಷ್ಟೆಷ್ಟು ವಿಚಾರಗಳಲ್ಲಿ ಏಕಾಭಿಪ್ರಾಯವೂ ಅವಿರೋಧವೂ ಇವೆಯೋ ಅಷ್ಟೇ ಅಥವಾ ಇನ್ನೂ ಹೆಚ್ಚು ವಿಷಯಗಳಲ್ಲಿ ಭಿನ್ನತೆಯೂ ಅಸಾಮಂಜಸ್ಯವೂ ಕಂಡು ಬರುತ್ತವೆ. ಒಬ್ಬರಿಗೆ ಸುಖರೂಪವಾದದ್ದು ಇನ್ನೊಬ್ಬರಿಗೆ ದುಃಖರೂಪವಾಗಬಹುದು. ಒಬ್ಬರಿಗೆ ಧರ್ಮವಾಗಿ ತೋರಿದ್ದು ಇನ್ನೊಬ್ಬರಿಗೆ ಅಧರ್ಮವಾಗಿ ತೋರಬಹುದು. ಹೀಗೆಯೇ ಒಬ್ಬರು ಪುಣ್ಯವೆಂದು ಭಾವಿಸಿದ್ದನ್ನು ಇನ್ನೊಬ್ಬರು ಪಾಪವೆಂದು ಭಾವಿಸಬಹುದು. ಇಷ್ಟು ವೈವಿಧ್ಯ, ರುಚಿಭೇದ, ವೈಲಕ್ಷಣ್ಯಗಳಿಂದ ಕೂಡಿದ ಪ್ರಪಂಚದಲ್ಲಿ ಯಾವ ರೀತಿ ಜೀವನವನ್ನು ನಡೆಸಬೇಕು ? ಸಾರ್ಥಕಗೊಳಿಸಬೇಕು ? ಎಂಬ ಪ್ರಶ್ನೆಯು ಆಲೋಚನಾಪರನಾದ ಮಾನವನಿಗೆ ಬಂದೇ ಬರುತ್ತದೆ. ಪ್ರಕೃತಿ ನಿಯಮವನ್ನರಿತು ಪ್ರಪಂಚದ ಸಮಸ್ಯೆಗಳನ್ನು ಪರಿಹರಿಸುವ ವಿಚಾರದಲ್ಲಿ ಹಿಂದಿನ ಋಷಿವರ್ಯರೂ, ಆಚಾರ್ಯರೂ, ಮಹಾಪುರುಷರೂ ಪಟ್ಟ ಪ್ರಯತ್ನಗಳ ಫಲವೇ ನಮ್ಮ ಅಮೂಲ್ಯವಾದ ವೇದ ಮತ್ತು ದರ್ಶನಾದಿ ಶಾಸ್ತ್ರಗಳೆನ್ನಬಹುದು. ವಸ್ತುತಃ ನಮ್ಮ ದೇಶದಲ್ಲಿ ಪ್ರತಿಯೊಂದು ಶಾಸ್ತ್ರಕ್ಕೂ ಮೋಕ್ಷಪ್ರಾಪ್ತಿಯೇ ಧ್ಯೇಯವಾಗಿದ್ದು ಅದಕ್ಕೆ ಉಪಾಯರೂಪವಾಗಿಯೇ ಶಾಸ್ತ್ರಗಳ ಪ್ರಾಮುಖ್ಯವೂ ಬೆಳವಣಿಗೆಯೂ ನಡೆದು ಬಂದಿದ್ದರೂ ಇವುಗಳಲ್ಲೆಲ್ಲ ವೇದಾಂತ ದರ್ಶನವೇ ಈ ವಿಚಾರದಲ್ಲಿ ನಿಷ್ಕೃಷ್ಟವಾದ ಜ್ಞಾನವನ್ನು ಕೊಡತಕ್ಕುದಾಗಿದೆ. ಈ ವೇದಾಂತ ದರ್ಶನದ ಆವಿರ್ಭಾವವನ್ನೂ ಬೆಳವಣಿಗೆಯನ್ನೂ ಸಂಕ್ಷೇಪವಾಗಿ ಪರಿಶೀಲಿಸಿದರೆ ಶ್ರೀ ರಾಮಾನುಜಾಚಾರ್ಯರು ಎಷ್ಟು ಮಟ್ಟಿಗೆ ಪ್ರಪಂಚಕ್ಕೆ ಉಪಕಾರ ಮಾಡಿರುವರೆಂಬ ವಿಷಯವು ವ್ಯಕ್ತವಾಗುತ್ತದೆ. ಪ್ರಕೃತ ಶ್ರೀರಾಮಾನುಜದರ್ಶನದ ಐತಿಹಾಸಿಕ ಮತ್ತು

ಸಾಂಸ್ಕೃತಿಕ ಹಿನ್ನೆಲೆಯನ್ನು ಈಗಾಗಲೇ ಚಿತ್ರಿಸಿಯಾಗಿದೆ. ಕೆಲವು ಮುಖ್ಯ ವಿಚಾರಗಳನ್ನು ಮಾತ್ರ ಪುನಃ ಗಮನಿಸಿದರೂ ತಪ್ಪಾಗದು.

ಆದರೆ ಶಾಂಕರ ಸಿದ್ಧಾಂತವು ವೈದಿಕಮತೋದ್ಧಾರಕ್ಕಾಗಿ ಶ್ರಮಿಸಿದರೂ ಪೂರ್ಣನಾದ ಆಧ್ಯಾತ್ಮಿಕ ಜೀವನಕ್ಕೆ ಬೇಕಾಗುವ ಎಲ್ಲ ಅಂಶಗಳನ್ನೂ ಒಳಗೊಂಡಿಲ್ಲವೆಂಬ ಕಾರಣದಿಂದ ಆದರ ವಿಚಾರದಲ್ಲಿ ಒಂದು ವಿಧವಾದ ಅತೃಪ್ತಿಯೂ ಅಸಹಕಾರವೂ ಕೆಲವರಲ್ಲಿ[೧] ಇದ್ದೇ ಇದ್ದುವು. ನಾಸ್ತಿಕತೆಯೇನೋ ಹೋಗಿ ಬ್ರಹ್ಮಾಸ್ತಿತ್ವವು ಸ್ಥಾಪಿತವಾಯಿತು; ಜಗತ್ತು ಮಿಥ್ಯಾಭೂತವಾಯಿತು. ಇದು ಸಮಂಜಸವಾದ ತರ್ಕಪರಿಶುದ್ಧವಾದ ದಾರ್ಶನಿಕವ್ಯವಸ್ಥೆಯಾದರೂ ಅನುಭವಕ್ಕೆ ಅಗ್ರಾಹ್ಯವಾಯಿತು. ಪ್ರಪಂಚದ ಸಮಸ್ಯೆಗಳನ್ನು ಬಿಡಿಸುವಾಗ ನಾನಾ ವಿಧವಾದ ನಿಯಮಗಳನ್ನು ಪಾಲಿಸಬೇಕಾಗುವುದು. ಒಂದು ಕಡೆ ಅನುಭವದ ಒರೆಗಲ್ಲು, ಒಂದು ಕಡೆ ಆಸ್ತಿಕ ಭಾವನೆಯ (Theism)ನ್ನು ಪೋಷಿಸುವ ಆವಶ್ಯಕತೆ; ಮತ್ತೊಂದು ಕಡೆ ಸಿದ್ಧಾಂತದಲ್ಲಿ ಶಾಸ್ತ್ರೀಯವಾದ ಅವಿರೋಧ ಅಥವಾ ಸಾಮಂಜಸ್ಯಗಳ ಸಂಪಾದನೆ. ಇದರ ಜೊತೆಗೆ ಭಾರತೀಯ ಸಂಸ್ಕೃತಿಯಲ್ಲಿ ಶೈವ ವೈಷ್ಣವ ಪಕ್ಷಪಾತಗಳ ಹೋರಾಟ, ವೇದಾಂತವು ಯಾವ ಒಂದು ಪಕ್ಷವನ್ನು ಸಮರ್ಥಿಸಿದರೂ ಇನ್ನೊಂದು ಪಂಗಡದವರಿಗೆ ಅನುಪಾದೇಯವಾಗುವುದು. ಮತ್ತು ಇಲ್ಲಿನ ಆಸ್ತಿಕಭಾವನೆಗೆ ತರ್ಕವು ಅನುಪಯುಕ್ತ[೨]ವಾದುದರಿಂದ ಶ್ರುತಿಯಿಂದ ಪರತತ್ವವನ್ನು ಸಾಧಿಸಬೇಕಾಗಿ ಬಂದು ಶ್ರುತಿಯಲ್ಲಿ ಸಾಮಂಜಸ್ಯಕ್ಕಾಗಿಯೂ ವೇದಾಂತವು ಹೊಡೆದಾಡಬೇಕಾಯಿತು. ಇದೊಂದು ದೊಡ್ಡ ತೊಂದರೆ.[೩] ಕಡೆಯದಾಗಿ, ವೇದಾಂತವು ಮತಾಚಾರಕ್ಕೆ (Religion) ಪರಿಪೋಷಕವೂ ಆಗಬೇಕಾಗಿ

---

೧. ಇವರ ಪೈಕಿ ಶ್ರೀ ಯಾದವಪ್ರಕಾಶ, ಭಾಸ್ಕರ, ಹಿಂದಿನ ಆಳ್ವಾರುಗಳು ಎಲ್ಲರೂ ಮುಖ್ಯರಾದವರು.

೨. ಶ್ರುತಿಯಿಂದ ಈಶ್ವರ ಸಿದ್ಧಿಯಾದ ಮೇಲೆ ಶ್ರುತಿಪರಿಪೋಷಕ್ಕಾಗಿ ಮಾತ್ರ ತರ್ಕವು ಉಪಯುಕ್ತವೆಂದೂ ಕೇವಲ ತರ್ಕಕ್ಕಾಗಲೀ ಶ್ರುತಿವಿರುದ್ಧವಾದ ಅಸತ್ತರ್ಕಗಳಿಗಾಗಲೀ ವೇದಾಂತ ಶಾಸ್ತ್ರದಲ್ಲಿ ಮಾನ್ಯತೆಯಿಲ್ಲ.

೩. ಇದಕ್ಕಾಗಿ ಎಲ್ಲ ಮತದವರೂ ಶ್ರಮಿಸಿದ್ದಾರೆ. ಐಕ್ಯಶ್ರುತಿ, ಭೇದ ಶ್ರುತಿಗಳ ವಿಚಾರ ಮುಂದೆ ಬರುತ್ತದೆ.

ಬಂತು. ಈ ಎಲ್ಲ ತೊಂದರೆಗಳಿರುವಲ್ಲಿ ಯಾವ ಒಂದು ಆವಶ್ಯಕತೆಯನ್ನು ಪೂರ್ಣಗೊಳಿಸಲು ಪ್ರಯತ್ನಪಟ್ಟರೂ ಇತರ ಅನೇಕ ನ್ಯೂನತೆಗಳು ಉಂಟಾಗುವುದು ಸಹಜ. ಪ್ರಕೃತ, ಅದ್ವೈತದಲ್ಲೂ ಹೀಗೆಯೇ ಆಯಿತು. ಶಾಂಕರರಂತೆಯೇ ವೈದಿಕ ಮತಾನುಯಾಯಿಗಳಾದವರು ಕೂಡ ಈ ಸಿದ್ಧಾಂತವನ್ನು ಒಪ್ಪದೆ, ಇದು ತತ್ವಪ್ರಕಾಶಕವಲ್ಲವೆಂದೂ, ವೇದಾಂತ ಶಾಸ್ತ್ರಕ್ಕೆ ಮೂಲಭೂತವಾದ ಬಾದರಾಯಣ ಸೂತ್ರಗಳ ಮತ್ತು ಉಪನಿಷತ್ತುಗಳ ತಾತ್ಪರ್ಯವು ಬೇರೆಯೆಂದೂ ವಾದಿಸಿ ಅದೇ ರೀತಿ ಪ್ರಚುರಪಡಿಸುತ್ತಿದ್ದರು. ಈ ವಿಚಾರದಲ್ಲಿ ಶ್ರೀ ರಾಮಾನುಜಾಚಾರ್ಯರಿಗಿಂತ ಹಿಂದಿನವರಾದ ಅನೇಕ ಆಚಾರ್ಯರು ಗ್ರಂಥಗಳನ್ನು ಬರೆದರು. ಇಷ್ಟೆಲ್ಲ ನಡೆದಿದ್ದರೂ ಶಾಂಕರ ಸಿದ್ಧಾಂತವನ್ನು ಖಂಡಿಸಿ 'ವಿಶಿಷ್ಟಾದ್ವೈತ' ತತ್ವವನ್ನು ಜನರಿಗೆ ತಿಳಿಸಿ, ತನ್ಮೂಲಕ ಅನೇಕ ಅನುಯಾಯಿಗಳಿಗೆ ಆಚಾರಯೋಗ್ಯವಾಗುವ ರೀತಿಯಲ್ಲಿ ಈ ಮತವನ್ನು ಸ್ಥಾಪಿಸುವ ಕೆಲಸವನ್ನು ಯಾರೂ ಸಮರ್ಪಕವಾಗಿ ಮಾಡಿರಲಿಲ್ಲ.

ಈ ಪವಿತ್ರವಾದ ಕೆಲಸವನ್ನು ನೆರವೇರಿಸುವುದಕ್ಕೋಸ್ಕರವೇ ಏನೋ ಎನ್ನುವ ಹಾಗೆ ಶ್ರೀ ರಾಮಾನುಜಾಚಾರ್ಯರು ಸುಮಾರು ಕ್ರಿ. ಶ. ಹನ್ನೊಂದನೆಯ ಶತಮಾನದ ಅಂತ್ಯದಲ್ಲಿ ಕಾಂಚೀ ಪ್ರದೇಶದಲ್ಲಿ ಅವತರಿಸಿದರು. ಇವರ ಉಜ್ವಲವಾದ ವ್ಯಕ್ತಿತ್ವ, ಬುದ್ಧಿಯ ತೀಕ್ಷ್ಣತೆ, ಕಾರ್ಯತತ್ಪರತೆ, ಗ್ರಂಥರಚನ ಕೌಶಲ, ಅಸದೃಶವಾದ ಪಾಂಡಿತ್ಯ ಮತ್ತು ಇವರ ವೈಯಕ್ತಿಕ ಜೀವನ, ತೀರ್ಥಯಾತ್ರೆ, ದೇವಾಲಯಗಳ ಪುನರುಜ್ಜೀವನ ಇವೇ ಮೊದಲಾದ ಅನೇಕ ವಿಚಾರಗಳು ಬಹಳ ಮಟ್ಟಿಗೂ ಉಪನ್ಯಾಸಾರ್ಹವೂ, ಆಹ್ಲಾದಕರವೂ ಆಗಿವೆಯೆಂಬುದು ಈ ವೇಳೆಗೆ ವ್ಯಕ್ತಪಟ್ಟಿರಬೇಕು. ಪ್ರಕೃತ ಲೇಖನದಲ್ಲಿ ಸಿದ್ಧಾಂತದ ವಿಚಾರಗಳನ್ನು ಸಂಗ್ರಹವಾಗಿ ಪ್ರಸ್ತಾಪಿಸಲಾಗಿದೆ.

ಶ್ರೀ ರಾಮಾನುಜ ಸಿದ್ಧಾಂತವು ಹಿಂದಿನ ಆಚಾರ್ಯರಿಂದಲೂ ಎತ್ತಿ ಹಿಡಿಯಲ್ಪಟ್ಟಿತ್ತೆಂದ ಮಾತ್ರಕ್ಕೆ ಶ್ರೀ ರಾಮಾನುಜಾಚಾರ್ಯರಿಗೆ ಮತವನ್ನು ಸ್ಥಾಪಿಸಿದ ಯಶಸ್ಸು ಸ್ವಲ್ಪವೂ ಕಡಿಮೆಯಾಗುವುದಿಲ್ಲ. ಈ ವಿಚಾರದಲ್ಲಿ ಹಿಂದಿನ ಆಚಾರ್ಯರು ಎಷ್ಟು ಕೆಲಸಮಾಡಿದ್ದರು ? ಬೇರೆ ಬೇರೆ ಸಿದ್ಧಾಂತಗಳನ್ನು ಪರಿಶೋಧಿಸಿ ಯಾವಯಾವ ವಿಷಯಗಳನ್ನು ಸ್ವೀಕರಿಸಿದ್ದರು ? ಮತ್ತು ಶ್ರೀರಾಮಾನುಜಾಚಾರ್ಯರು ಯಾವ ರೀತಿ ಇವನ್ನೆಲ್ಲ ಕ್ರೋಢೀಕರಿಸಿ

ಶಾಸ್ತ್ರರೂಪವಾಗಿ ಬರೆದಿಟ್ಟರು ? ಎಂಬ ವಿಚಾರಗಳನ್ನು ಮೊಟ್ಟಮೊದಲಿನ ಲೇಖನದಲ್ಲಿ ವಿವರಿಸಿದೆ. ಇಷ್ಟನ್ನು ಮಾತ್ರ ಇಲ್ಲಿ ಗಮನಿಸಬಹುದು.

ಹಿಂದಿನ ಸಿದ್ಧಾಂತದ ವಿಷಯಗಳನ್ನು ತೆಗೆದುಕೊಂಡದ್ದರಿಂದ 'ವಿಶಿಷ್ಟಾದ್ವೈತ' ಸಿದ್ಧಾಂತದ ವೈಶಿಷ್ಟ್ಯವು ಯಾವ ರೀತಿಯಲ್ಲೂ ಕಡಿಮೆಯಾಗಲು ಕಾರಣವಿಲ್ಲ. ಯಾವ ಸಿದ್ಧಾಂತಕ್ಕೇ ಆಗಲಿ ಹಿಂದಿನಿಂದ ಬಂದ ಒಂದು ಮೂಲವು ಇದ್ದೇ ಇರುತ್ತದೆ. ಯಾವುದೂ ಹಿಂದಿನ ಅಂಕುರದ ಸಹಾಯವಿಲ್ಲದೆ ಸಂಪೂರ್ಣವಾಗಿ ನೂತನವಾಗಿ ಸೃಷ್ಟಿಸಲ್ಪಡುವುದಿಲ್ಲ. ಆದುದರಿಂದ ಉತ್ಕೃಷ್ಟವಾದ ಪುರಾತನ ವಿಷಯಗಳನ್ನು ಸ್ವೀಕರಿಸುವುದರಿಂದ ಯಾವ ಅಪಕರ್ಷವೂ ದೋಷವೂ ಉಂಟಾಗುವುದಿಲ್ಲ. ಮತ್ತು ಶ್ರೀರಾಮಾನುಜಾಚಾರ್ಯರ ಹಿಂದಿನ ಕಾಲದಲ್ಲಿ ಒಂದು ವಿಧವಾದ ' ಸಂಪ್ರದಾಯ 'ವು ಮಾತ್ರ ಪ್ರಚಾರದಲ್ಲಿದ್ದಿತೆಂದು ತಿಳಿಸಲಾಗಿದೆ. ಯಾವ ಸಿದ್ಧಾಂತಕ್ಕಾಗಲಿ ಈ 'ಸಂಪ್ರದಾಯ' ದಶೆಯು ಒಂದು ಮೆಟ್ಟಿಲೆಂದು ಹೇಳಬಹುದು. ಆದ್ದರಿಂದ ಈ 'ಸಂಪ್ರದಾಯ' ವನ್ನು ಶಾಸ್ತ್ರ ಅಥವಾ 'ಸಿದ್ಧಾಂತದ' ಮಟ್ಟಕ್ಕೆ ಏರಿಸಿ ಅದಕ್ಕೆ ಗಣ್ಯವಾದ ಸ್ಥಾನವನ್ನು ಸಂಪಾದಿಸಿದ ಹಿರಿಮೆಯು ಶ್ರೀ ರಾಮಾನುಜಾಚಾರ್ಯರಿಗೇ ಸೇರಿದ್ದೆಂಬುದರಲ್ಲಿ ಸಂದೇಹವೇ ಇಲ್ಲ. ಈ ರೀತಿ ಸಂಪ್ರದಾಯ ಸಿದ್ಧವಾದ ವಿಷಯಗಳನ್ನು ಸ್ವಬುದ್ಧಿಯಿಂದ ಪರಿಷ್ಕರಿಸಿ ಶಾಸ್ತ್ರರೂಪವಾಗಿ ಸ್ಥಾಪಿಸಿದ್ದಲ್ಲದೆ ಇದರ ರಹಸ್ಯವನ್ನು ಜನರಿಗೆ ತಿಳಿಯುವಂತೆ ಪ್ರಚಾರ ಪಡಿಸುವ ಕೆಲಸದಲ್ಲಿಯೂ ಆಚಾರ್ಯರು ತುಂಬ ಶ್ರದ್ಧೆವಹಿಸಿದ್ದರು. ಇಡೀ ಮಾನವ ಕುಲದ ಉದ್ಧಾರಕ್ಕಾಗಿಯೂ ಮೋಕ್ಷಪ್ರಾಪ್ತಿಗಾಗಿಯೂ ಆಜನ್ಮ ಶ್ರಮಪಟ್ಟವರಲ್ಲಿ ಇವರು ಅಗ್ರಗಣ್ಯರೆಂದರೆ ಅತಿಶಯೋಕ್ತಿಯಾಗಲಾರದು. ಹೀಗೆ ಸ್ಥಾಪಿಸಲ್ಪಟ್ಟ ವಿಶಿಷ್ಟಾದ್ವೈತ ವೇದಾಂತವು ಇವರ ಅನುಯಾಯಿಗಳಾದ ಅನೇಕರಿಂದ ವಿವರಿಸಲ್ಪಟ್ಟು ಪರಿಷ್ಕಾರವನ್ನೂ ಅಭಿವೃದ್ಧಿಯನ್ನೂ ಹೊಂದಿತು. ಇವರ ಪೈಕಿ ಶ್ರೀ ಸುದರ್ಶನಸೂರಿ, ಶ್ರೀ ವೇಂಕಟನಾಥ (ವೇದಾಂತದೇಶಿಕರು), ಶ್ರೀ ಶ್ರೀನಿವಾಸಾಚಾರ್ಯ, ಶ್ರೀಮಲ್ಲೋಕಾಚಾರ್ಯ ಇವರುಗಳು ಮುಖ್ಯರಾದವರು.

## ಸಿದ್ಧಾಂತದ ಸ್ವರೂಪ

ವಿಶಿಷ್ಟಾದ್ವೈತಸಿದ್ಧಾಂತದ ಸ್ವರೂಪವನ್ನು ವಿವರಿಸಲು ಅನೇಕ ಮಾರ್ಗಗಳು ಆಶ್ರಯಿಸಲ್ಪಟ್ಟಿವೆ. ಕೆಲವರು೧ ಚೇತನ, ಅಚೇತನ, ಈಶ್ವರ ರೂಪವಾದ ತತ್ತ್ವತ್ರಯ ನಿರೂಪಣದಿಂದ ಆರಂಭಿಸಿ ' ಏಕತತ್ತ್ವವಾದ ' ಕ್ಕೂ ಇದಕ್ಕೂ ಸಾಮರಸ್ಯವನ್ನು ಏರ್ಪಡಿಸಿ ಕ್ರಮವಾಗಿ ಆಯಾ ಸಂದರ್ಭದಲ್ಲಿ ಪ್ರಮಾಣಪ್ರಮೇಯನಿರೂಪಣವನ್ನು ಮಾಡಿರುತ್ತಾರೆ. ಮತ್ತೆ ಕೆಲವರು೨ ಪ್ರಮಾಣ, ಪ್ರಮೇಯ, ಸಮನ್ವಯ ಮತ್ತು ಫಲ ಎಂಬ ನಾಲ್ಕು ವಿಭಾಗ ಗಳನ್ನು ಮಾಡಿಕೊಂಡು ಸಿದ್ಧಾಂತದ ಸ್ವಾರಸ್ಯವನ್ನು ವಿವರಿಸುವುದುಂಟು. ಶ್ರೀ ವೆಂಕಟನಾಥರ 'ನ್ಯಾಯಸಿದ್ಧಾಂಜನ' ಗ್ರಂಥದಲ್ಲಿ ಜಡ, ಜೀವ, ಈಶ್ವರ, ನಿತ್ಯವಿಭೂತಿ, ಬುದ್ಧಿ ಮತ್ತು ಅದ್ರವ್ಯ ಎಂಬ ಆರು ಪರಿಚ್ಛೇದಗಳಲ್ಲಿ ಸಿದ್ಧಾಂತವು ಪ್ರಕಾಶಿಸಲ್ಪಟ್ಟಿದೆ. ' ಯತಿಪತಿದೀಪಿಕೆ 'ಯಲ್ಲಿ ಪ್ರತ್ಯಕ್ಷ, ಅನುಮಾನ, ಶಬ್ದ, ಪ್ರಕೃತಿ, ಕಾಲ, ನಿತ್ಯವಿಭೂತಿ, ಬುದ್ಧಿ, ಜೀವ, ಈಶ್ವರ ಮತ್ತು ಅದ್ರವ್ಯ ಇವುಗಳ ನಿರೂಪಣವೆಂಬ ಹತ್ತು ಪರಿಚ್ಛೇದಗಳಲ್ಲಿ ಇದೇ ವಿವರಣವು ಉಪಲಬ್ಧವಾಗಿದೆ.

ಮೇಲೆ ಸೂಚಿಸಿದ ಹಾಗೆ ಸುಖಾವಾಪ್ತಿಯೇ ಪ್ರತಿಯೊಂದು ಜೀವಿಯ ಧ್ಯೇಯವು ಆಗಿರುವುದೆಂದಮೇಲೆ ಸುಖವೆಂದರೇನು ? ಕೇವಲ ಐಹಿಕ ಸುಖವೇ ? ಆಮುಷ್ಮಿಕ ಸುಖವೇ ? ಅಥವಾ ಇವೆರಡೂ ಸೇರಿದ್ದೇ ? ಎಂಬ ಆಶಂಕೆಗಳು ಉಂಟಾಗುವುದು ಸಹಜ. ದೇಹಾತಿರಿಕ್ತವಾದ ಆತ್ಮವಿಲ್ಲವೆಂದು ನಂಬಿ ಪುಣ್ಯಾಪಾಪವಿವೇಕವಿಲ್ಲದೆ ಅತಿಮಾನುಷವಾದ ಯಾವ ಒಂದು ದೇವತೆಯ ಸತ್ಯತೆಯನ್ನೂ ತಿಳಿಯದೆ ಕೇವಲ ಐಹಿಕ ದೃಷ್ಟಿಯಿಂದ 'ಯಾವಜ್ಜೀವಂ ಸುಖಂ ಜೀವೇತ್,' 'ಋಣಂ ಕೃತ್ವಾ ಘೃತಂ ಪಿಬ' ಮೊದಲಾದ ತತ್ತ್ವಗಳ ಅನುಯಾಯಿಗಳಾದ ಚಾರ್ವಾಕರ ಮಾತಿರಲಿ. ಇವರ ಸಿದ್ಧಾಂತವು

---

೧. ಶ್ರೀಮಲ್ಲೋಕಾಚಾರ್ಯರ ' ತತ್ತ್ವತ್ರಯ ' ಗ್ರಂಥವನ್ನು ನೋಡಬಹುದು.

೨. ಶ್ರೀ. ಮಂ. ಅ. ಜಯರಾಮವೆಂಕಟಾಚಾರ್ಯರ ವಿಶಿಷ್ಟಾದ್ವೈತ ದೀಪಿಕೆಯಲ್ಲಿ ಈ ಕ್ರಮವನ್ನು ಅನುಸರಿಸಲಾಗಿದೆ.

ಮುಕ್ತಿ ಯಾರಿಗೂ ಉಪಾದೇಯವಲ್ಲ. ಮುಕ್ತಿ ದರ್ಶನಕಾರರ ದೃಷ್ಟಿಯಲ್ಲಿ ಐಹಿಕಸುಖಕ್ಕಿಂತ ಆಮುಷ್ಮಿಕಸೌಖ್ಯವೇ ಉತ್ತಮವೆಂದೂ, ಸತ್ಕರ್ಮ ಫಲವಾಗಿ ತಾತ್ಕಾಲಿಕವಾದ ಐಹಿಕಸುಖವು ದೊರಕಿದರೂ ಶಾಶ್ವತವಾದ ಮೋಕ್ಷ ಪ್ರಾಪ್ತಿಯೇ ಸರ್ವೋತ್ಕೃಷ್ಟವೆಂಬುದೂ ಸ್ಪಷ್ಟವಾಗಿದೆ. ಇದನ್ನೇ ಕೈವಲ್ಯ, ಮೋಕ್ಷ, ಮುಕ್ತಿ, ಅಪವರ್ಗ ಮೊದಲಾದ ಶಬ್ದಗಳಿಂದ ವ್ಯವಹರಿಸುತ್ತಾರೆ.

ಮೋಕ್ಷದ ಸ್ವರೂಪವನ್ನು ವಿವಿಧ ದರ್ಶನಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ನಿರೂಪಿಸಲಾಗಿದೆ. ಕೆಲವರಿಗೆ೬ ಇದು ಕೇವಲ 'ನಿರ್ವಾಣ' ರೂಪವಾದದ್ದು ಎಂದರೆ ಒಂದು ವಿಧವಾದ 'ಶೂನ್ಯತೆ'.೭ ಮತ್ತೆ ಕೆಲವರಿಗೆ೮ ಇದು ದುಃಖಧ್ವಂಸರೂಪವಾದದ್ದು. ಇನ್ನೊಂದು೯ ದೃಷ್ಟಿಯಿಂದ ಪ್ರಕೃತಿ ಸಂಯೋಗ ರೂಪವಾದ ಬಂಧನದಿಂದ ಬಿಡುಗಡೆ ಹೊಂದಿ ಪ್ರಕೃತಿಯಿಂದ ಬೇರೆಯಾಗುವಿಕೆಯೇ ಮೋಕ್ಷ. ಶಾಶ್ವತವಾದ ಅಗಲುವಿಕೆಯು ಮೋಕ್ಷವೆಂದೂ ಅಶಾಶ್ವತವಾದದ್ದು ಕೈವಲ್ಯವೆಂದೂ ವ್ಯವಹಾರವಿರುತ್ತದೆ. ಜೈನರ ಮತಾನುಸಾರ 'ಆತ್ಯಂತಿಕ' ಕರ್ಮಕ್ಷಯವೇ ಮೋಕ್ಷ. ಕಾಯಕ್ಲೇಶ, ತಪಸ್ಸು ಮೊದಲುಗಳಿಂದ ಕರ್ಮಬಂಧವನ್ನು ನಿರೋಧಿಸಿ ಆತ್ಯಂತಿಕ ಕರ್ಮಕ್ಷಯವನ್ನು ಸಾಧಿಸಿದರೆ ಮುಕ್ತನಾಗುವನು. ವಿವೇಕದ ಮೂಲಕ ಭ್ರಾಂತಿಯ ನಿವೃತ್ತಿಯೇ ಮೋಕ್ಷವೆಂದು ಮತ್ತೊಂದು ಅಭಿಪ್ರಾಯ. ಸರ್ವಥಾ 'ಅವಿದ್ಯೆಯ' ನಾಶದಿಂದಲೇ ಮುಕ್ತಿಯೆಂದು ಅದ್ವೈತಿಗಳ ಅಭಿಪ್ರಾಯ. ಈ ಮತಕ್ಕನುಸಾರವಾಗಿ ವಿದೇಹಮುಕ್ತಿ, ಜೀವನ್ಮುಕ್ತಿ ಈ ಎರಡು ವಿಧವಾದ ಮುಕ್ತಿಗಳೂ ಸಾಧ್ಯ. ಆದರೆ ಕಡೆಯದು ಮೊದಲನೆಯದರಲ್ಲೇ ಪರ್ಯವಸಾನ ಹೊಂದುತ್ತದೆ. ಈ ರೀತಿ ಅನೇಕ ಅಭಿಪ್ರಾಯಗಳಿರುತ್ತವೆ. ಆದರೆ ಶ್ರೀ ರಾಮಾನುಜದರ್ಶನದಲ್ಲಿ ಮೋಕ್ಷದ ಸ್ವರೂಪವನ್ನು ಬೇರೆ ರೀತಿಯಲ್ಲಿ ಹೇಳಿದೆ. ಈ ಸಿದ್ಧಾಂತದ ರೀತಿಯಾಗಿ ಮೋಕ್ಷವು ಕೇವಲ ಪಾಷಾಣ

---

೬. ಈ ಶಬ್ದಗಳಿಗೆ ಪರಸ್ಪರ ಸೂಕ್ಷ್ಮವಾದ ಅರ್ಥ ಭೇದವೂ ಕೆಲವು ದರ್ಶನಗಳಲ್ಲಿ ಉಕ್ತವಾಗಿದೆ.

೭. ಬೌದ್ಧರ ಒಂದು ಪಂಗಡ. ೮. ನೈಯಾಯಿಕರು. ೯. ಸಾಂಖ್ಯರು.

ಕಲ್ಪನೆಯೂ ಅಲ್ಲ; ಜ್ಞಾನಯೋಗದಿಂದ ಮಾತ್ರ ಅರ್ಜಿಸಲ್ಪಡುವುದೂ ಅಲ್ಲ; ಬರಿಯ ಕರ್ಮಕ್ಷಯವಾಗಲೀ ಪ್ರಕೃತಿಬಂಧವಿಮೋಕ್ಷವಾಗಲೀ ಅಲ್ಲ. ಆದರೆ ಪರಮಪುರುಷನಾದ ಶ್ರೀಮನ್ನಾರಾಯಣನ ಪರಮಾನುಗ್ರಹಕ್ಕೆ ಪಾತ್ರನಾಗಿ ತತ್ಸಾನಿಧ್ಯ, ತತ್ಕೈಂಕರ್ಯಗಳಿಂದ ಹೊಂದುವ ನಿರತಿಶಯವಾದ ಶಾಶ್ವತ ಸುಖ. ಮುಕ್ತನಾದ 'ಜೀವ'ನು ಪರಮಪುರುಷನ ಅತ್ಯಂತ ಸಾಮ್ಯವನ್ನು ಹೊಂದಿ ಭಗವದಾರಾಧನಪರನಾಗಿ ತತ್ಕೈಂಕರ್ಯೈಕಧ್ಯೇಯನಾಗಿ ಭಗವದಪಚಾರ, ಭಾಗವತಾಪಚಾರಗಳನ್ನು ಪರಿತ್ಯಜಿಸಿ ಕೇವಲ ಸುಖರೂಪವಾದ ಸನ್ನಿವೇಶದಲ್ಲಿ ಶಾಶ್ವತವಾಗಿರುತ್ತಾನೆಂದು ನಿರೂಪಿಸಲ್ಪಟ್ಟಿದೆ. ಇದೆಲ್ಲ ಭೌತಿಕ ದೇಹವನ್ನು ಪರಿತ್ಯಜಿಸಿದ ವೇಳೆಯೇ ಸಂಭವಿಸತಕ್ಕದ್ದು. ಜೀವನು ದೇಹತ್ಯಾಗಾನಂತರ ಅರ್ಚಿರಾದಿ ಮಾರ್ಗದಲ್ಲಿ ಪ್ರಯಾಣ ಮಾಡಿ ಸೂರ್ಯ ವರುಣಾದ್ಯನೇಕ ಲೋಕಗಳನ್ನು ದಾಟಿ ಅಲ್ಲಲ್ಲಿ 'ನಿತ್ಯಸೂರಿ'ಗಳಿಂದ ಸತ್ಕರಿಸಲ್ಪಟ್ಟು ಪ್ರಾಕೃತ ಸೂಕ್ಷ್ಮಭೂತಗಳ ಸಂಬಂಧವನ್ನು ಬಿಟ್ಟು ದಿವ್ಯವಾದ ದೇಹವನ್ನು ಹೊಂದಿ ನಿರತಿಶಯ ವೈಭವ ಪರಿಪೂರ್ಣವಾದ ಸ್ವರ್ಗಲೋಕಕ್ಕೆ ತೆರಳಿ ಅಲ್ಲಿ ಗಾಂಭೀರ್ಯ, ಔದಾರ್ಯ, ವಾತ್ಸಲ್ಯಾದಿ ಸಕಲಗುಣಪರಿಪೂರ್ಣನಾದ ಪರಮಪುರುಷನ ಸಾನ್ನಿಧ್ಯದಿಂದ ಪರಮಾನಂದ ಭರಿತನಾಗಿ ಅನೇಕ ಉತ್ತಮಗುಣಗಳನ್ನು[೧೦] ಸ್ವಾಭಾವಿಕವಾಗಿ ಹೊಂದಿ ಪರಮಾತ್ಮಾನುಭವವೆಂಬ ಆನಂದವನ್ನು ಹೊಂದುವನು. ಸಿದ್ಧಾಂತದೃಷ್ಟಿಯಿಂದ ಈ ರೀತಿ ಮೋಕ್ಷವನ್ನು ವರ್ಣಿಸುವುದರ ತಾತ್ಪರ್ಯವು ಸೊಗಸಾಗಿದೆ. ಮೋಕ್ಷವು ಕೇವಲ ಶೂನ್ಯರೂಪವೂ ಪಾಷಾಣಕಲ್ಪವೂ ಆದದ್ದೆಂದು ನಿರೂಪಿಸಿದಲ್ಲಿ ಅನೇಕರಿಗೆ ಅದರಲ್ಲಿ ಪ್ರವೃತ್ತಿಯೇ ಉಂಟಾಗದಿರಬಹುದು. ಸಾಮಾನ್ಯ ಜನರಿಗಂತೂ ಮೋಕ್ಷದ ಆವಶ್ಯಕತೆಯು ತೋರದೇ ಇರುವುದೂ ಸಹಜ. ತತ್ಪರಿಣಾಮವಾಗಿ ಪಾಮರಭೂಯಿಷ್ಠವಾದ ಮಾನವಕುಲಕ್ಕೇ ಮೋಕ್ಷಲಾಭವು ಆಗದಿರಬಹುದು. ಹಿಂದೆ ಯಾರೋ ಹೇಳಿದರಂತೆ—

ಇಕ್ಷೋರ್ವಿಕಾರಾಃ ಮತಯಃ ಕವೀನಾಂ
ಗವಾಂ ರಗೋ ಬಾಲಕಚೇಷ್ಟಿತಾನಿ ।
ತಾಂಬೂಲಮುಗ್ರ್ಯಂ ಯುವತೇಃ ಕಟಾಕ್ಷಾಃ
ಏತಾನ್ಯಹೋ ಶಕ್ರ ನ ಸಂತಿ ನಾಕೇ ॥

---

೧೦. 'ಅಪಹತಪಾಪ್ಮಾ ವಿರಜಃ' ಇತ್ಯಾದಿ ಶ್ರುತಿಯಲ್ಲಿ ಹೇಳಿರುವ.

ಆದ್ದರಿಂದ ನಿನ್ನ ಸ್ವರ್ಗವು ನಿನಗೇ ಇರಲಿ; ನನಗೇನೂ ಬೇಕಾಗಿಲ್ಲ ಎಂದು ತಾತ್ಪರ್ಯ. ಹೀಗೆ ಅಭಿಪ್ರಾಯಪಡಬಹುದಾದ್ದರಿಂದ, ಈ ಐಹಿಕ ಸುಖವನ್ನೆಲ್ಲ ಮೀರಿಸಿದ ಎಲ್ಲ ವಿಧವಾದ ಸೌಖ್ಯವೂ ಪರಮಪುರುಷನ ಸಾನ್ನಿಧ್ಯದಲ್ಲಿ ಸರ್ವದಾ ಲಭಿಸುವುದೆಂದು ಹೇಳಿದ ಸಿದ್ಧಾಂತಕಾರರ ಮತವು ಬಹಳಮಟ್ಟಿಗೆ ಸ್ವರಸವಾಗಿಯೂ ಕಾಮರೋದ್ಬೋಧಕವಾಗಿಯೂ ಇದೆ. ಹೀಗೆ ಮೋಕ್ಷ ಸ್ವರೂಪವನ್ನು ವರ್ಣಿಸಿದಲ್ಲಿ ಯಾರಿಗೆ ತಾನೆ ಅದರಲ್ಲಿ ಆಸೆ ಹುಟ್ಟುವುದಿಲ್ಲ ? ಆಸೆ ಹುಟ್ಟಿದರೆ ಪ್ರವೃತ್ತಿ ಉಂಟಾಗುತ್ತದೆ. ಕ್ರಮವಾಗಿ ಜೀವದ ಮೋಕ್ಷಕ್ಕೆ ದಾರಿಯಾದಂತಾಗುವುದು. ಈ ರೀತಿ ಮೋಕ್ಷದ ಸ್ವರೂಪವನ್ನು ಕೇವಲ ಸುಖ ರೂಪವೆಂಬುದನ್ನು ತಿಳಿಸಿ ಕರ್ಮಫಲ ಬದ್ಧನಾದ ಜೀವನಿಗೆ ಅದರಲ್ಲಿ ಪ್ರವೃತ್ತಿಯುಂಟಾಗುವಂತೆ ಮಾಡಿ ಕ್ರಮೇಣ ಮೋಕ್ಷ ಪ್ರಾಪ್ತಿಗೆ ಉಪಾಯಗಳನ್ನು ತೋರಿಸಿರುತ್ತಾರೆ.

ಮೋಕ್ಷಪ್ರಾಪ್ತಿಗೆ ಉಪಾಯವನ್ನು ನಿರೂಪಿಸುವಾಗಲೂ ಇತರ ಶಾಸ್ತ್ರಕಾರರು ಬಹುವಿಧವಾಗಿ ಅಭಿಪ್ರಾಯಪಟ್ಟಿರುತ್ತಾರೆ. ಹಿಂದೆ ಹೇಳಿದಂತೆ ಭಾರತೀಯ ಶಾಸ್ತ್ರಕಾರರೆಲ್ಲರೂ ತಮ್ಮ ತಮ್ಮ ಶಾಸ್ತ್ರಗಳನ್ನು ಸ್ವಲ್ಪಮಟ್ಟಿಗೆ ತಿಳಿದರೂ ಮೋಕ್ಷಪ್ರಾಪ್ತಿಯಾಗುವುದೆಂದು ಸಾರಿರುತ್ತಾರೆ. ಸಾಹಿತ್ಯಶಾಸ್ತ್ರದಲ್ಲಿ " ಕಾವ್ಯಂ ಯಶಸೆ ಅರ್ಥಕೃತೇ ಸದ್ಯಃ ಪರನಿರ್ವೃತಯೇ " ೧೧ ಎಂದು ಕಾವ್ಯಪ್ರಯೋಜನವನ್ನು ಹೇಳಿರುತ್ತಾರೆ. ವ್ಯಾಕರಣಶಾಸ್ತ್ರದಲ್ಲಿ "ಏಕಃಶಬ್ದಃ ಸುಪ್ರಯುಕ್ತಃ ಸಮ್ಯಕ್‌ಜ್ಞಾತಃ ಸ್ವರ್ಗೇಲೋಕೇ ಕಾಮಧುಗ್‌ಭವತಿ "೧೨ ಎಂದು ಒಂದು ಶಬ್ದವನ್ನು ಸರಿಯಾಗಿ ತಿಳಿದು ಪ್ರಯೋಗಿಸಿದರೂ ಸಾಕು, ಮೋಕ್ಷ ಸಿಕ್ಕುತ್ತದೆ ಎಂದು ಹೇಳಿರುತ್ತಾರೆ. ಹಾಗೆಯೇ ಯಾಜ್ಞವಲ್ಕ್ಯಸ್ಮೃತಿಯಲ್ಲಿ ' ವೀಣಾವಾದನತತ್ವಜ್ಞಃ ಶ್ರುತಿಜಾತಿವಿಶಾರದಃ । ತಾಲಜ್ಞಶ್ಚಾಪ್ರಯಾಸೇನ ಮೋಕ್ಷಮಾರ್ಗಂ ನಿಗಚ್ಛತಿ ॥"೧೩ ಎಂದು ಸಂಗೀತ ಶಾಸ್ತ್ರವನ್ನು ಮೋಕ್ಷದಾಯಕವನ್ನಾಗಿ ಪ್ರಶಂಸಿಸಿರುತ್ತಾರೆ. ಹೀಗೆಯೇ ಇತರ ಅನೇಕ ಶಾಸ್ತ್ರಗಳಿಗೂ ಮೋಕ್ಷವನ್ನೇ ಪ್ರಯೋಜನವನ್ನಾಗಿ ಹೇಳಿರುವುದನ್ನು ನೋಡಿ

---

೧೧. ಕಾವ್ಯ ಪ್ರಕಾಶ. ೧ನೆಯ ಉಲ್ಲಾಸ; ಕಾರಿಕೆ. ೭.

೧೨. ಪತಂಜಲಿಯವರ ಮಹಾಭಾಷ್ಯದ್ದು.

೧೩. ಯಾಜ್ಞವಲ್ಕ್ಯ ಸ್ಮೃತಿ, ಅಧ್ಯಾಯ ೩. ಶ್ಲೋ. ೧೧೫.

ದರೆ ಕಷ್ಟಸಾಧ್ಯವಾದ ವೇದಾಂತಾದಿ ಶಾಸ್ತ್ರಗಳೂ ಅನುಷ್ಠಾನವೂ ಸಂಪೂರ್ಣವಾಗಿ ನಿರರ್ಥಕವಾಗಿ ತೋರಬಹುದು. ಆದರೆ ಇತರರು ತಮ್ಮ ಶಾಸ್ತ್ರಗಳು ಮೋಕ್ಷಪ್ರಯೋಜಕವೆಂದು ನಿರೂಪಿಸುವಾಗ ಜನರಿಗೆ ಆಯಾ ಶಾಸ್ತ್ರದಲ್ಲಿ ಪ್ರವೃತ್ತಿಯನ್ನೂ ಅಭಿರುಚಿಯನ್ನೂ ಮತ್ತು ಐಕಾಗ್ರ್ಯವನ್ನೂ ಉಂಟುಮಾಡುವುದೇ ತಾತ್ಪರ್ಯವೇ ಹೊರತು ಬೇರೆ ಏನೂ ಇರಲಾರದು. ಎಲ್ಲರೂ ವೇದಾಂತಿಗಳಾಗಲೂ ಸಾಧ್ಯವಿಲ್ಲ; ಎಲ್ಲರೂ ಸಾಹಿತಿಗಳಾಗಲೀ, ಸಂಗೀತ ಶಾಸ್ತ್ರಜ್ಞರಾಗಲೀ ಆಗಲು ಸಾಧ್ಯವಿಲ್ಲ. ‘ಭಿನ್ನರುಚಿರ್ಹಿಲೋಕಃ’ ೧೪ ಎಂಬ ನ್ಯಾಯಕ್ಕನುಸಾರವಾಗಿ ಕೆಲವರಿಗೆ ಸಾಹಿತ್ಯದಲ್ಲೂ ಮತ್ತೆ ಕೆಲವರಿಗೆ ಮಿಕ್ಕ ಶಾಸ್ತ್ರಗಳಲ್ಲಿಯೂ ಅಭಿರುಚಿಯಿರುತ್ತದೆ. ಹಾಗಿದ್ದ ಮಾತ್ರಕ್ಕೆ ವೇದಾಂತವು ಯಾರಿಗೂ ಬೇಕಿಲ್ಲವೆಂದಲ್ಲ. ಮಿಕ್ಕ ಶಾಸ್ತ್ರಗಳಿಂದ ಮೋಕ್ಷವು ಎಷ್ಟೇ ಸುಲಭ ಸಾಧ್ಯವಾಗಿರಲಿ ವೇದಾಂತವು ಸ್ವಲ್ಪಮಟ್ಟಿಗಾದರೂ ಅವರವರ ಯೋಗ್ಯತೆಗನುಸಾರವಾಗಿ ಬೇಕೇಬೇಕು. ಇದಿಲ್ಲದೆ ನಿತ್ಯಜೀವನವು ಪರಿಶುದ್ಧವಾಗಿ ಆಧ್ಯಾತ್ಮಿಕ ದೃಷ್ಟಿಯೂ ಶ್ರದ್ಧೆಯೂ ಹುಟ್ಟುವುದಿಲ್ಲ. ಈ ಅಭಿಪ್ರಾಯದಿಂದಲೇ ರಾಮಾನುಜ ಸಿದ್ಧಾಂತದಲ್ಲಿ ಮೋಕ್ಷಕ್ಕೆ ಎರಡು ಉಪಾಯಗಳನ್ನು ಹೇಳಿರುತ್ತಾರೆ. ಮಿಕ್ಕ ದರ್ಶನಗಳಲ್ಲಿ ಸಾಮಾನ್ಯವಾಗಿ ‘ಜ್ಞಾನಾತ್ ಮೋಕ್ಷಪ್ರಾಪ್ತಿಃ’ ಎಂದು ಮೋಕ್ಷಕ್ಕೆ ತತ್ವಜ್ಞಾನ ಮಾತ್ರವೇ ಸಾಕೆಂದು ನಿರೂಪಿಸಲ್ಪಟ್ಟಿದೆ. ಆದರೆ ರಾಮಾನುಜ ಸಿದ್ಧಾಂತದಲ್ಲಿ ಜ್ಞಾನ ಕರ್ಮಗಳೆರಡೂ ಭಕ್ತಿಯೋಗಕ್ಕೆ ಮಾರ್ಗರೂಪವಾದವು. ಹೀಗೆ ಭಕ್ತಿಯೋಗವನ್ನು ಸಾಧಿಸಲು ಜ್ಞಾನಾರ್ಜನೆ, ಕರ್ಮಾನುಷ್ಠಾನ ಇವೆರಡನ್ನೂ ಮಾಡುವುದು ಸಾಮಾನ್ಯ ಜನರಿಗೆ ಸಾಧ್ಯವಿಲ್ಲವೆಂದು ತಿಳಿದೇ ಬೇರೊಂದು ಉಪಾಯವನ್ನು ಹೇಳಲಾಗಿದೆ. ಅದೇ ‘ಪ್ರಪತ್ತಿ’. ಪ್ರಪತ್ತಿಯಿಂದ ಯಾರಿಗೆ ಬೇಕಾದರೂ ಮೋಕ್ಷ ಲಭಿಸಬಹುದು.[೧೫] ಅಂತೂ ಮೇಲೆ ಹೇಳಿದ ರೀತಿಯಲ್ಲಿ ಇತರ ಶಾಸ್ತ್ರನಿಷ್ಣಾತರಾಗಿ ವೈದಿಕ ಜ್ಞಾನಾರ್ಜನೆ, ಕರ್ಮಾನುಷ್ಠಾನಗಳಿಗೆ ಅವಕಾಶ ಸಾಲದಿರುವ ಎಲ್ಲರಿಗೂ ಕರ್ಮ ವಶದಿಂದ ಅತ್ಯಂತ ಕ್ಷೀಣ ದಶೆಯಲ್ಲಿರುವ

---

೧೪. ಕಾಳಿದಾಸನ ರಘುವಂಶದ್ದು.

೧೫. ‘ಪ್ರಪತ್ತಿ’ಗೂ ಒಂದು ವಿಧವಾದ ಅರ್ಹತೆಯು ಬೇಕು. ಇದರ ವಿಚಾರ ಮುಂದೆ ಬರುತ್ತದೆ.

ಆದರೆ ನಿರ್ವೇದರೂಪವಾದ ಜ್ಞಾನೋದಯವನ್ನು ಹೊಂದಿರುವವರಿಗೂ ಈ ಮಾರ್ಗವು ಅತ್ಯಂತ ಉಪಯುಕ್ತವಾಗಿದೆ. ಇದರಿಂದ ಸಿದ್ಧಾಂತರೀತಿಯಾಗಿ ಎಲ್ಲರಿಗೂ ಮೋಕ್ಷಪ್ರಾಪ್ತಿಗೆ ಉಪಾಯವು ಇದ್ದೇ ಇದೆ. ಮತ್ತು ಇತರ ಶಾಸ್ತ್ರಗಳೂ ವೃತ್ತಿಗಳೂ ಎಷ್ಟೇ ಇರಲಿ ವೇದಾಂತಶಾಸ್ತ್ರವು ಸರ್ವಥಾ ಉಪಯುಕ್ತವಾದದ್ದು, ಮತ್ತು ಆಚಾರಕ್ಕೆ ಯೋಗ್ಯವಾದದ್ದು ಎಂದು ಹೇಳಿದ ಹಾಗಾಯಿತು.

ಮೋಕ್ಷಕ್ಕೆ ಉಪಾಯವಾದ ಭಕ್ತಿಯೋಗವನ್ನು ಸಿದ್ಧಾಂತಕಾರರು ಪ್ರಶಂಸಿಸಿರುತ್ತಾರೆ. ಇದು ರಾಮಾನುಜಸಿದ್ಧಾಂತದ ವೈಶಿಷ್ಟ್ಯವೆನ್ನಬಹುದು. ಒಂದುಕಡೆ ಜ್ಞಾನಯೋಗವನ್ನು ಕೆಲವರು ಹೊಗಳಿ ಕರ್ಮಯೋಗವನ್ನು ಅದಕ್ಕೆ ಮೆಟ್ಟಿಲನ್ನಾಗಿ ಪರಿಗಣಿಸುತ್ತಾರೆ. ಮತ್ತೊಂದು ದೃಷ್ಟಿಯಿಂದ ಜ್ಞಾನವೆಷ್ಟಿದ್ದರೇನು ? ಕರ್ಮ ಮತ್ತು ಅನುಷ್ಠಾನವೇ ಮುಖ್ಯವೆಂದು ಕೆಲವರು ವಾದಿಸುತ್ತಾರೆ. ಈ ಎರಡು ಪಕ್ಷಗಳಿಗೂ ಸಾಮಂಜಸ್ಯವನ್ನು ಕಲ್ಪಿಸಿ ಎಲ್ಲಕ್ಕಿಂತಲೂ ಮುಖ್ಯವಾದ ಭಕ್ತಿಯ ಕಡೆಗೆ ಗಮನವನ್ನು ಸೆಳೆದಿರುವುದು ರಾಮಾನುಜ ಸಿದ್ಧಾಂತದಲ್ಲಿ ಮಾತ್ರವೇ ಎಂದು ತೋರುತ್ತದೆ. ಇದರಲ್ಲಿ ಇನ್ನೊಂದು ವಿಶೇಷಾಂಶವಿರುವುದು. ಕೇವಲ ಜ್ಞಾನಯೋಗವನ್ನು ಆಶ್ರಯಿಸುವವರ ಸಿದ್ಧಾಂತದಲ್ಲಿ 'ಈಶ್ವರ'ನು ಅಂಗೀಕೃತನಾಗಿದ್ದರೂ ಅವನಿಗೆ ಯಾವ ರೀತಿಯಾದ ಅನುಗ್ರಹ ಬುದ್ಧಿಯೂ ಅಸದೃಶವಾದ ಔದಾರ್ಯ, ವಾತ್ಸಲ್ಯಾದಿ ಗುಣಗಳೂ ಇರುವುವೆಂಬುದು ತಕ್ಕ ರೀತಿಯಲ್ಲಿ ನಿರೂಪಿಸಲ್ಪಟ್ಟಿಲ್ಲ. ಪಾಮರ ಮುಮುಕ್ಷುಗಳ ದೃಷ್ಟಿಯಿಂದ ಇದು ಬಹಳ ಆವಶ್ಯಕ. ಏಕೆಂದರೆ ದುಃಖ, ನಿರಾಶೆಗಳಿಂದ ಬಳಲಿದ ದಶೆಯಲ್ಲಿ ಉಂಟಾಗಬಹುದಾದ ಈಶ್ವರನ ವೈಷಮ್ಯನೈರ್ಘೃಣ್ಯವಿಷಯಕವಾದ ಅವಿಶ್ವಾಸ ಭಾವನೆಯು ದೂರವಾಗಬೇಕಾದರೆ ಇದೊಂದೇ ಮಾರ್ಗ. ಈ ಸಿದ್ಧಾಂತದಲ್ಲಿ ಭಕ್ತಿಯೋಗಕ್ಕೆ ಪ್ರಾಮುಖ್ಯವನ್ನು ಕೊಟ್ಟಿರುವುದರಿಂದ ತದನುಸಾರವಾಗಿ ಈಶ್ವರನ ಯಥಾರ್ಥವಾದ ಪ್ರಾಮುಖ್ಯವನ್ನೂ ಸರ್ವೋತ್ಕರ್ಷವನ್ನೂ ಅಂಗೀಕರಿಸಿದ ಹಾಗಾಯಿತು. ಮೋಕ್ಷಪ್ರಾಪ್ತಿಗೆ ಅವನ ಅನುಗ್ರಹವೇ ಮುಖ್ಯವೆಂದು ಹೇಳಿದೆ. ಹೀಗೆ ನಿರೀಶ್ವರಮನೋಭಾವವನ್ನು ತೊಡೆದುಹಾಕಿ ಈಶ್ವರನ ನಿಜವಾದ ಸಾಮರ್ಥ್ಯವನ್ನೂ ಮಹಿಮೆಯನ್ನೂ ಸ್ಥಾಪಿಸಲು ಭಕ್ತಿಯೋಗವು ಸಹಕಾರಿ

ಯಾಯಿತು. ನಾಸ್ತಿಕನೆಂಬ ದೂರನ್ನು ಹೋಗಲಾಡಿಸಿಕೊಳ್ಳಲು ಮಾತ್ರ ಈಶ್ವರನನ್ನು ಅಂಗೀಕರಿಸಿದಂತಾಗಲಿಲ್ಲ.

'ಭಕ್ತಿ' ಎಂದರೆ ಪರಮಾತ್ಮನ ಯಥಾರ್ಥ ಜ್ಞಾನಪೂರ್ವಕವಾದ ಧ್ಯಾನ, ಅರ್ಚನೆ, ಪ್ರಣಾಮ ಮೊದಲಾದುವು ಜೀವಾತ್ಮ ಪರಮಾತ್ಮರ ಯಥಾರ್ಥ ಸ್ವರೂಪವನ್ನು ತಿಳಿದು ವೇದೋಕ್ತ ರೀತಿಯಲ್ಲಿ ಪರಮಪುರುಷನಾದ ಶ್ರೀಮನ್ನಾರಾಯಣನ ಪಾದಾರವಿಂದವನ್ನು ಧ್ಯಾನಮಾಡುವಿಕೆ, ಇವೇ ಮೊದಲಾದುವು ಭಕ್ತಿಯೆಂದು ಕರೆಯಲ್ಪಡುತ್ತವೆ. ಒಂದು ರೀತಿಯಾಗಿ ನೋಡಿದರೆ ಭಕ್ತಿಯೂ ಒಂದು ವಿಧವಾದ ಜ್ಞಾನವೆಂದು ಶ್ರೀ ವೇಂಕಟನಾಥರ ಗ್ರಂಥದಲ್ಲಿ[೧೬] ಹೇಳಲ್ಪಟ್ಟಿದೆ. ಅಂತೂ ಭಕ್ತಿಗೆ ಬಹಳ ವಿಶಾಲವಾದ ಅರ್ಥವು ಸಿದ್ಧಾಂತದಲ್ಲಿ ಉಕ್ತವಾಗಿದೆ. ಕೇವಲ ಕಾಯಿಕವಾದ ವ್ಯಾಪಾರವು ಭಕ್ತಿಯೆನ್ನಿಸಿಕೊಳ್ಳುವುದಿಲ್ಲ. ಅಂತರಂಗವು ಶುದ್ಧವಾಗಿದ್ದು ಉತ್ಕೃಷ್ಟವಾದ ಯಥಾರ್ಥ ಸ್ವರೂಪಜ್ಞಾನದಿಂದ ಈ ವ್ಯಾಪಾರಗಳು ಸಹಕೃತವಾಗಿರಬೇಕು. ವಾಚಿಕವಾಗಿ ನಾಮಸಂಕೀರ್ತನ, ಜಪ, ಮಂತ್ರಪಠನ ರೂಪವಾಗಿಯೂ ಮಾನಸಿಕವಾಗಿ ಧ್ಯಾನ, ಧಾರಣ, ಸಮಾಧಿ ರೂಪವಾಗಿಯೂ ಇರತಕ್ಕುದಾದ ಭಕ್ತಿಯು 'ಪರಭಕ್ತಿ'ಗೆ ಕಾರಣವಾಗುತ್ತದೆ. ಶಾಸ್ತ್ರಾಭ್ಯಾಸದಿಂದಲೂ ಸತ್ಸಹವಾಸದಿಂದಲೂ ಪರಮಾತ್ಮನಲ್ಲಿ ನಿರತಿಶಯವಾದ ಒಂದು ವಿಧವಾದ ಪ್ರೀತಿಯುಂಟಾಗುತ್ತದೆ. ಇದೇ ಭಕ್ತಿ. ಇದರಿಂದ 'ಪರಬ್ರಹ್ಮ' ಸಾಕ್ಷಾತ್ಕಾರವನ್ನು ಹೊಂದಲು ಉತ್ಕಟೇಚ್ಛೆಯು ಹುಟ್ಟುತ್ತದೆ. ತತ್ಫಲವಾಗಿ ಪರಮಾತ್ಮಾನುಗ್ರಹದಿಂದ ತಾತ್ಕಾಲಿಕವಾದ ಪರಮಾತ್ಮಸಾಕ್ಷಾತ್ಕಾರರೂಪವಾದ ಅಭೀಷ್ಟವು ದೊರಕುತ್ತದೆ. ಹೀಗೆ ಭಕ್ತಿಯಿಂದ 'ಪರಭಕ್ತಿ' ಯುಂಟಾಗಿ ಅದರಿಂದ ಪರಜ್ಞಾನವು ಲಭಿಸಿದ ಮೇಲೆ ಈ ಪರಜ್ಞಾನವು ಅಂದರೆ ಪರಮಾತ್ಮ ಸಾಕ್ಷಾತ್ಕಾರವು ಯಾವಾಗಲೂ ಇರಬೇಕೆಂಬ ತೀವ್ರಾಭಿಲಾಷೆಯೂ ಉಂಟಾಗುತ್ತದೆ, ಇದೇ ಪರಮಭಕ್ತಿ. 'ಪರಮಭಕ್ತಿ' ಯನ್ನುಳ್ಳ ಪರಮಭಕ್ತನನ್ನು ಉದ್ಧಾರ ಮಾಡಲು, ಮುಕ್ತನನ್ನಾಗಿ ಬರಮಾಡಿಕೊಳ್ಳಲು, ಪುತ್ರನಿಂದ ಅಗಲಿ ಪುನ

೧೬. ತಾತ್ಪರ್ಯ ಚಂದ್ರಿಕೆ—ಇದಕ್ಕೆ ಶ್ರೀ ರಾಮಾನುಜಾಚಾರ್ಯರ ಗ್ರಂಥಗಳಲ್ಲಿಯೂ ಸ್ಪಷ್ಟವಾದ ಆಧಾರವಾಕ್ಯಗಳಿವೆ.

ಮಿಲನವನ್ನು ಬಯಸುವ ತಂದೆಯಂತೆ, ಪರಮಪುರುಷನಾದ ಭಗವಂತನು ಕಾತರನಾಗಿರುತ್ತಾನೆಂದು ಹೇಳಿದೆ.

ಜ್ಞಾನವೆಂಬುದು ಸಿದ್ಧಾಂತದಲ್ಲಿ ಅಂಗೀಕೃತವಾಗಿರುವ ಆರು ದ್ರವ್ಯಗಳಲ್ಲಿ ಒಂದು. ಇದೇ ಸಕಲವ್ಯಾಪಾರಗಳಿಗೂ ಕಾರಣ ಮತ್ತು ದೀಪಕ್ಕೆ ಪ್ರಭೆಯು ಹೇಗೋ ಹಾಗೆ ಸ್ವಪ್ರಕಾಶಕ ಮತ್ತು ಪರಪ್ರಕಾಶಕ. ಇದು ಸಾಮಗ್ರೀವಿಶೇಷ, ವಿಷಯಸಂಬಂಧ ಇವುಗಳಿಗನುಗುಣವಾಗಿ ಪ್ರತ್ಯಕ್ಷ, ಪರೋಕ್ಷ, ಸಂಶಯ, ಮೊದಲಾಗಿ ಅನೇಕ ವಿಧವಾಗುವುದರಿಂದ ದ್ರವ್ಯವೆಂದೂ ಕ್ಷಣಿಕವೆಂದೂ ಪರಿಗಣಿಸಲ್ಪಟ್ಟಿದೆ. ಇದರ ಹಾಗೆಯೇ ಸ್ವಯಂಪ್ರಕಾಶಗಳಾಗಿರುವ ಆತ್ಮದ್ರವ್ಯಗಳೂ ಜ್ಞಾನಪದವಾಚ್ಯವಾಗುವುದನ್ನು ಪರಿಹರಿಸುವುದಕ್ಕೋಸ್ಕರ ಇವನ್ನು 'ಧರ್ಮಭೂತಜ್ಞಾನ' ವೆಂದು ವ್ಯವಹರಿಸುತ್ತಾರೆ. ಈ ಧರ್ಮಭೂತಜ್ಞಾನವು ಕೆಲವು ವಿಷಯಗಳಲ್ಲಿ ಅದ್ವೈತಿಗಳ 'ಅಂತಃಕರಣ' ವನ್ನು ಹೋಲುತ್ತದೆ. ಧರ್ಮ ಭೂತಜ್ಞಾನವನ್ನು ಹೊಂದಿರುವುದರಿಂದಲೇ ಆತ್ಮವಸ್ತುಗಳಿಗೆ ಚೇತನತ್ವ, ಜ್ಞಾತೃತ್ವ, ಕರ್ತೃತ್ವ, ಭೋಕ್ತೃತ್ವಾದಿಗಳು ಸಲ್ಲುತ್ತವೆ.

'ವಿಶಿಷ್ಟಾದ್ವೈತ' ಸಿದ್ಧಾಂತ ರೀತಿಯಾಗಿ ಜ್ಞಾನವೆಲ್ಲವೂ ಯಥಾರ್ಥ. ಆದರೆ ಶುಕ್ತಿ (ಕಪ್ಪೆಚಿಪ್ಪು) ಯಲ್ಲಿ ರಜತ (ಬೆಳ್ಳಿ) ಜ್ಞಾನಕ್ಕೆ ಹೇಗೆ ಉಪಪತ್ತಿ ಯೆಂಬ ಆಶಂಕೆ ಹುಟ್ಟುತ್ತದೆ. ಶುಕ್ತಿಯಲ್ಲಿ ಹುಟ್ಟುವ ರಜತಜ್ಞಾನವೂ ಯಥಾರ್ಥವೇ ಆಗುತ್ತದೆ. ಹೇಗೆಂದರೆ ರಜತಾಂಶವು ಶುಕ್ತಿಯಲ್ಲಿಲ್ಲದಿದ್ದರೆ ಶುಕ್ತಿಯನ್ನು ರಜತವೆಂದು ತಿಳಿಯಲು ಕಾರಣವಿಲ್ಲ. ಆದ್ದರಿಂದ ಶುಕ್ತಿಯಲ್ಲಿ ರಜತಾಂಶವು ಇದ್ದೇಇದೆ. ಹಾಗೆಯೇ ಎಲ್ಲಾ ವಸ್ತುಗಳಲ್ಲಿಯೂ ಪ್ರಾಯಃ ಇತರ ಸಮಾನ ವಸ್ತುಗಳ ಅಂಶವು ಮಿಶ್ರವಾಗಿಯೇ ಇರುವುದೆಂದೂ ಹೇಳಿದೆ. ಆದರೆ 'ಭ್ರಮೆ' ಎಂದರೇನು? ಎಂಬ ಪ್ರಶ್ನೆ ಒಂದೇಬರುತ್ತದೆ. ಅದರ ವಿಚಾರದಲ್ಲಿ ಸಂಕ್ಷೇಪವಾಗಿ ಹೀಗೆ ಹೇಳಬಹುದು. ಶುಕ್ತಿ, ರಜ್ಜು (ಹಗ್ಗ) ಮೊದಲಾದುವುಗಳಲ್ಲಿ ರಜತ, ಸರ್ಪಾದಿಗಳ ಅಂಶಸಂಬಂಧವು ಇದ್ದರೂ ಶುಕ್ತಿತ್ವ, ರಜ್ಜುತ್ವಾದ್ಯಂಶಗಳ ಭೂಯಸ್ತ್ವವು (ಹೆಚ್ಚುಗಾರಿಕೆ) ಇರುತ್ತದೆ. ಇದರಿಂದಲೇ ಶುಕ್ತಿಯಲ್ಲಿ ಶುಕ್ತಿಯೆಂತಲೂ ರಜ್ಜುವಿನಲ್ಲಿ ರಜ್ಜುವೆಂತಲೂ ವ್ಯವಹಾರವಿರುವುದು. ಹೀಗಿರುವಾಗ, ಶುಕ್ತಿಯಲ್ಲಿರುವ ಶುಕ್ತಿರಜತಸಾಧಾರಣ

ವಾದ ಅಂಶವನ್ನು ಮಾತ್ರ ನೋಡಿ ಶುಕ್ತಿಯ ಅಸಾಧಾರಣಾಂಶವನ್ನೂ ಶುಕ್ತಿತ್ವ ಭೂಯಸ್ತ್ವಗಳನ್ನೂ ನೋಡದೆ ಇರುವಿಕೆಯೇ ಭ್ರಮೆ. ಇದೇ ಶುಕ್ತಿ ವಿಷಯದಲ್ಲಿ ರಜತಜ್ಞಾನ ಬರುವುದಕ್ಕೆ ಕಾರಣ. ಎಂದರೆ ಶುಕ್ತಿ ರಜ್ಜುಗಳಲ್ಲಿ ರಜತ ಸರ್ಪಾದಿಗಳ ಭೇದಕವಾದ ಅಸಾಧಾರಣಾಂಶಗಳನ್ನು ನೋಡದೆ ಇರುವಿಕೆಯೆಂಬ ಅಸಮ್ಯಕ್‌ಜ್ಞಾನವೇ ಭ್ರಮೆಯೆಂದು ಹೇಳಬಹುದು.

ಧರ್ಮಭೂತ ಜ್ಞಾನವನ್ನು ಶಾಸ್ತ್ರಜನ್ಯವೆಂದೂ ಯೋಗಜನ್ಯವೆಂದೂ ಎರಡು ಭಾಗ ಮಾಡಬಹುದು. ಇನ್ನೊಂದು ರೀತಿಯಲ್ಲಿ "ಧರ್ಮಭೂತ ಜ್ಞಾನ"ದ ಪರಿಣಾಮಗಳಾದ ಪ್ರತ್ಯಕ್ಷ, ಅನುಮಾನ ಮತ್ತು ಶಬ್ದ ಎಂಬ ಮೂರು ಪ್ರಮಾಣಗಳನ್ನು ಮಾತ್ರ ಸಿದ್ಧಾಂತಕಾರರು ಒಪ್ಪಿರುತ್ತಾರೆ. ಮಿಕ್ಕ ಉಪಮಾನ, ಅರ್ಥಾಪತ್ತಿ, ಅನುಪಲಬ್ಧಿ ಇವುಗಳು ಅನುಮಾನದಲ್ಲೇ ಅಂತರ್ಭವಿಸುವುವೆಂದು ಅಭಿಪ್ರಾಯ. ಪ್ರತ್ಯಕ್ಷವು ಸವಿಕಲ್ಪಕ, ನಿರ್ವಿಕಲ್ಪಕ ಎಂದು ಎರಡು ವಿಧ. ಪೂರ್ವ ಸ್ಮೃತಿಸಹಿತವಾದ ಅಥವಾ ಜಾತಿಸ್ಮೃತಿ ಸಹಿತವಾದ ಅನಂತರ ಹುಟ್ಟುವ ಜ್ಞಾನಕ್ಕೆ ಸವಿಕಲ್ಪಕವೆಂದು ಹೆಸರು. ಅದಿಲ್ಲದೆ ಮೊಟ್ಟಮೊದಲು ಹೊಂದಬಹುದಾದ ಜ್ಞಾನಕ್ಕೆ ನಿರ್ವಿಕಲ್ಪವೆಂದು ಹೆಸರು. ಅನಂತರ ಹುಟ್ಟಿದ್ದಾದರೂ ಸ್ಮೃತಿಸಹಿತವಾಗದಿದ್ದಲ್ಲಿ ನಿರ್ವಿಕಲ್ಪಕವೇ ಎಂದು ಸಂಕ್ಷೇಪ. ಜ್ಞಾನವೆಲ್ಲವೂ ಸವಿಶೇಷವಿಷಯಕವೇ ಹೊರತು ನಿರ್ವಿಶೇಷ ವಿಷಯಕವಲ್ಲ.

'ಅನುಮಾನ'ದ ವಿಚಾರದಲ್ಲಿ ಕಾರ್ಯಕಾರಣ ಭಾವನಿರೂಪಣೆಯು ಅತಿಮುಖ್ಯವಾದದ್ದು. ಇದೇ ಸಿದ್ಧಾಂತದ ಅನೇಕ ಅಂಶಗಳಿಗೆ ತಳಹದಿ. ಕಾರ್ಯಕಾರಣಭಾವದ ವಿಚಾರದಲ್ಲಿ ಪರಿಣಾಮವಾದವೆಂಬುದು ಅಂಗೀಕೃತವಾಗಿದೆ[೧೭] ಈ ವಾದದಿಂದಲೇ ಪ್ರಪಂಚದ ಆವಿರ್ಭಾವವನ್ನು ಸಿದ್ಧಾಂತಕಾರರು ಉಪಪಾದಿಸುತ್ತಾರೆ. ಎಲ್ಲ ವಸ್ತುಗಳೂ ಪ್ರಳಯಕಾಲದಲ್ಲಿ ಸೂಕ್ಷ್ಮಾವಸ್ಥೆಯಲ್ಲಿರುತ್ತವೆ. ಎಂದರೆ ಯಾವುದಕ್ಕೂ ಹೊಸದಾದ ಸತ್ತೆ (ಇರುವಿಕೆ)ಯು ಲಭಿಸುವುದಿಲ್ಲ. ಈ ಸೂಕ್ಷ್ಮಾವಸ್ಥೆಯಿಂದ ಭಗವತ್ಸಂಕಲ್ಪಾನುಸಾರವಾಗಿ ಕ್ರಮವಾಗಿ ಈಶ್ವರ, ಪ್ರಕೃತಿ, ಪುರುಷ ಎಂದು ಸ್ವಲ್ಪ ಸ್ಥೂಲಾವಸ್ಥೆಯು ಪರಿಣಮಿಸುತ್ತದೆ. ಅನಂತರ ಪಂಚಭೂತಗಳೇ ಮೊದಲಾಗಿ ಎಲ್ಲ ವಸ್ತುಗಳೂ

೧೭. ಸಾಂಖ್ಯರ ಪರಿಣಾಮವಾದಕ್ಕೂ ಇದಕ್ಕೂ ಬಹಳ ಹೋಲಿಕೆಯಿದೆ.

ತಮ್ಮತಮ್ಮ ಸ್ಥೂಲಾವಸ್ಥೆಯಲ್ಲಿ ಗೋಚರವಾಗುತ್ತದೆ. ಪರಿಣಾಮ ವಾದ ದಲ್ಲೂ ಅವಸ್ಥಾವಾದ, ಶಕ್ತಿವಾದ, ವಿಕಾರವಾದ ಎಂದು ಮೂರು ಪ್ರಕಾರಗಳಿವೆ ಶಕ್ತಿಮತದ ಪರಿಷ್ಕಾರವೇ ಶ್ರೀ ರಾಮಾನುಜಸಿದ್ಧಾಂತವೆಂದು ತಿಳಿಯ ಬಹುದು.

ಶಬ್ದಪ್ರಮಾಣದ ವಿಚಾರದಲ್ಲಿ ಪ್ರಾಭಾಕರರಿಗೆ ಸಮ್ಮತವಾದ 'ಅನ್ವಿತಾಭಿಧಾನವಾದ' ವೇ ಸಿದ್ಧಾಂತಕಾರರಿಗೆ ಒಪ್ಪಿದೆ. ಎಂದರೆ ಯಾವುದಾದ ರೊಂದು ವಾಕ್ಯವು ಕಿವಿಗೆ ಬಿದ್ದಲ್ಲಿ ಅದರಲ್ಲಿಯ ಪದಗಳ ಅರ್ಥವು ಸಂಕೇತಾನುಸಾರವಾಗಿ ಮೊದಲು ಸ್ಮರಣೆಗೆ ಬರುತ್ತದೆ. ಹೀಗಾದ ಮಾತ್ರಕ್ಕೆ ವಾಕ್ಯಾರ್ಥಜ್ಞಾನವು ಬಂದಹಾಗೆ ಕಾಣುವುದಿಲ್ಲ. ಅನಂತರ ಈ ಪದಗಳು ಅಭಿಪ್ರೇತವಾದ ರೀತಿಯಲ್ಲಿ ಅನ್ವಿತವಾಗಿಯೇ ಪದಾರ್ಥಭಿನ್ನ ವಾದ ವಾಕ್ಯಾರ್ಥಜ್ಞಾನವನ್ನು ಕೊಡುವುದೆಂದು ಅನ್ವಿತಾಭಿಧಾನವಾದಿಗಳ ಪಕ್ಷ. ಸಿದ್ಧಾಂತಕ್ಕನುಸಾರವಾಗಿ ಪ್ರವೃತ್ತಿಯಾಗಲೀ ನಿವೃತ್ತಿಯಾಗಲೀ ಉಂಟಾಗುವ ಮತ್ತು ವಿಧಿರೂಪದಲ್ಲಿರುವ ಕ್ರಿಯಾಪದಗಳಿಂದ ಕೂಡಿದ ವೇದವಾಕ್ಯಗಳೇ ಆಗಲೀ ಶಬ್ದಪ್ರಮಾಣವೆನ್ನಿಸಿಕೊಳ್ಳಲು ಅರ್ಹ. ಹೀಗಿಲ್ಲದಿರುವ ವೇದವಾಕ್ಯ ಗಳೂ ಇತರ ಲೌಕಿಕ ವಾಕ್ಯಗಳೂ ಕೂಡ ಪ್ರಮಾಣವಲ್ಲ. ಮತ್ತು ಪದ, ಪದಾರ್ಥಗಳ ಸಂಬಂಧದ ವಿಷಯದಲ್ಲಿ 'ಶಕ್ತಿ' 'ಭಕ್ತಿ' ಎಂಬ ಎರಡು ವೃತ್ತಿಗಳು ಮಾತ್ರ ಸ್ವೀಕೃತವಾಗಿವೆ. 'ಶಕ್ತಿ' ಯೆಂಬುದು 'ಅಭಿಧಾ' ವೃತ್ತಿಯೇ ಹೊರತು ಮತ್ತೇನೂ ಅಲ್ಲ. ಇದು ಸಾಕ್ಷಾತ್ಸಂಬಂಧರೂಪವಾದದ್ದು. 'ಭಕ್ತಿ' ಯು 'ಉಪಚಾರ', 'ಲಕ್ಷಣಾ' ಎಂದು ಹೇಳಲ್ಪಡುವ ಪರಂಪರಾಸಂಬಂಧ 'ಭಕ್ತಿ' ಯ ಸ್ವರೂಪವನ್ನು ವಿವರಿಸುವಾಗ ಸಿದ್ಧಾಂತದ ಅನೇಕ ರಹಸ್ಯಗಳು ಹೊರಪಡುತ್ತವೆ. ಎಲ್ಲಿ ಮುಖ್ಯಪ್ರಯೋಗವೆಂದು ನಿರ್ವಹಿಸಲು ಸಾಧ್ಯವೋ ಅಲ್ಲಿ ಅರ್ಥವು ಲಾಕ್ಷಣಿಕವೆಂದೂ, ಭಾಕ್ತವೆಂದೂ ವ್ಯವಹರಿಸಕೂಡದೆಂದು ಸಾಮಾನ್ಯ ನಿಯಮ. ನಮ್ಮ ಅನುಭವದಲ್ಲಿ ಕೆಲವು ಕಡೆ ಶರೀರವಾಚಕ ಪದಗಳನ್ನು ಅದರೊಳಗಿರುವ ಆತ್ಮವಿಷಯದಲ್ಲಿ ಪ್ರಯೋಗಿಸುವುದು ಕಂಡುಬಂದಿದೆ. ಇಲ್ಲಿ ಒಂದು ಮುಖ್ಯ ವಿಷಯವನ್ನು ಗಮನಿಸ ಬೇಕು. ವಿಶೇಷ್ಯವಿಶೇಷಣಭಾವವಿರುವ ಕೆಲವು ಸ್ಥಳಗಳಲ್ಲಿ ವಿಶೇಷ್ಯ ವಿಶೇಷಣಗಳನ್ನು ಪ್ರತ್ಯೇಕಿಸಲು ಸಾಧ್ಯ; ಮತ್ತೆ ಕೆಲವು ಕಡೆಗಳಲ್ಲಿ ಸಾಧ್ಯ

ವಿಲ್ಲ. ಏಕೆಂದರೆ ವಿಶೇಷ್ಯವನ್ನು ಯಾವತ್ತಿಗೂ ವಿಶೇಷಣವು ಆಶ್ರಯಿಸಿ ಕೊಂಡೇ ಇರುತ್ತದೆ. ಇಂತಹ ವಿಶೇಷಣಗಳಿಗೆ 'ಅಯುತಸಿದ್ಧ' ವಿಶೇಷಣ ಗಳೆಂದು ಹೆಸರು. ಅಯುತಸಿದ್ಧವಿಶೇಷಣವಾಚಕಪದಗಳು ವಿಶೇಷ್ಯ ಪರ್ಯಂತಾರ್ಥವನ್ನು ಕೊಡುತ್ತವೆಯೆಂದು ಸಿದ್ಧಾಂತದಲ್ಲಿ ನಿರ್ಣಯ ಮಾಡಿ ರುತ್ತಾರೆ. ಇದರಿಂದ 'ದೇವದತ್ತ' ಮೊದಲಾದ ಶಬ್ದಗಳಿಗೆ ತದ್ಗತವಾದ 'ಪರಮಾತ್ಮ' ನೆಂಬ ಅರ್ಥವನ್ನು ಬೋಧಿಸುತ್ತವೆಂದು ಹೇಳಿ ಶಬ್ದಗಳು ಕೇವಲ ವಸ್ತು ಮಾತ್ರವನ್ನು ಬೋಧಿಸದೆ ಅಲ್ಲಿಂದ ಪರಮಾತ್ಮನ ಪರ್ಯಂತ ಹೋಗಿ ನಿಲ್ಲುತ್ತವೆಂಬ ಅಭಿಪ್ರಾಯದ ಮೂಲಕ ಪರಮಾತ್ಮನ 'ಸರ್ವಶಬ್ದ ವಾಚ್ಯತ್ವ'ವನ್ನು ಉಪಪಾದಿಸುತ್ತಾರೆ. ಈ ಉಪಪತ್ತಿಯಿಂದ 'ತತ್ತ್ವಮಸಿ' ಮೊದಲಾದ ಕೆಲವು ವಾಕ್ಯಗಳಿಗೆ ಬಹಳ ಸ್ವಾರಸ್ಯವಾದ ಅರ್ಥವನ್ನು ಕಲ್ಪಿ ಸಿರುವುದಲ್ಲದೆ ಅದ್ವೈತಿಗಳು ಹೇಳುವಂತೆ ಆ ಸ್ಥಳದಲ್ಲಿ ಲಕ್ಷಣಾವೃತ್ತಿಯಿಂದ ಪರಬ್ರಹ್ಮಪರವಾದ ಅರ್ಥವು ಬರುವುದಿಲ್ಲವೆಂದೂ ಮುಖ್ಯಾರ್ಥವೇ ಬ್ರಹ್ಮಪರ ವೆಂದೂ ನಿರೂಪಿಸಿರುತ್ತಾರೆ.

ಪ್ರಮೇಯವು ಚಿತ್, ಅಚಿತ್, ಈಶ್ವರ ಎಂದು ಸ್ಥೂಲವಾಗಿ ಮೂರು ವಿಭಾಗಗಳನ್ನುಳ್ಳದ್ದು. ಸಕಲ ತತ್ತ್ವಗಳೂ ಈಶ್ವರ ತತ್ತ್ವದಲ್ಲಿ ಸೇರಿವೆ ಯೆಂಬ ಅಭಿಪ್ರಾಯದಿಂದ ಕೆಲವರು ಏಕತತ್ತ್ವವಾದವನ್ನೇ ಪೋಷಿಸುತ್ತಾರೆ. ಆದರೆ ರಾಮಾನುಜ ಸಿದ್ಧಾಂತರೀತಿಯಾಗಿ ಭೇದ, ಐಕ್ಯಗಳೆರಡೂ ಸಂರಕ್ಷಿಸ ಲ್ಪಟ್ಟಿವೆ. ಇದು ಗಮನಾರ್ಹ.

ತ್ರಿಗುಣ, ಕಾಲ, ಶುದ್ಧಸತ್ತ್ವ, ಜ್ಞಾನ, ಜೀವ ಮತ್ತು ಈಶ್ವರ ಎಂದು ದ್ರವ್ಯಗಳು ಆರು. ಇವುಗಳ ಪೈಕಿ ತ್ರಿಗುಣ, ಶುದ್ಧಸತ್ತ್ವ ಇವೆರಡರ ವಿಚಾರ ವಾಗಿ ಸಿದ್ಧಾಂತದಲ್ಲಿ ವಿಶದವಾದ ವರ್ಣನೆಯು ಸಿಕ್ಕುತ್ತದೆ. 'ತ್ರಿಗುಣ' ವೆಂಬುದು ಹೆಸರೇ ಸೂಚಿಸುವಂತೆ ಸತ್ತ್ವ, ರಜಸ್ಸು, ತಮಸ್ಸುಗಳೆಂಬ ಮೂರು ಗುಣಗಳನ್ನುಳ್ಳ ದ್ರವ್ಯ ಸಕಲ ಪ್ರಪಂಚಕ್ಕೂ ಇದೇ ಮೂಲಕಾರಣವಾದ್ದ ರಿಂದ ಇದನ್ನು ಮೂಲಪ್ರಕೃತಿ, ಅಕ್ಷರ, ಅವ್ಯಕ್ತ ಎಂದು ಅನೇಕ ರೀತಿ ಕರೆ ಯುವುದುಂಟು. ಸಾಂಖ್ಯರು ಹೇಳುವಂತೆ ಸತ್ತ್ವರಜಸ್ತಮೋಗುಣಗಳು ಸಮಾವಸ್ಥೆಯಲ್ಲಿದ್ದರೆ ಪ್ರಳಯವೂ, ವಿಷಮಾವಸ್ಥೆ ಹೊಂದಿದರೆ ಸೃಷ್ಟಿಯೂ ಆಗುತ್ತವೆ. ಆದರೆ ಈ ಸಿದ್ಧಾಂತದಲ್ಲಿ ಮೂಲಪ್ರಕೃತಿಯು ಈಶ್ವರಸಂಕಲ್ಪಾ

ಧೀನವಾಗಿಯೇ ಇರುತ್ತದೆ. ಇದರ ಪರಿಣಾಮವೇ ಪ್ರಪಂಚವೆಂದು ಹೇಳಲಾಗಿದೆ.

ಮೂಲಪ್ರಕೃತಿಯ ಮೊದಲನೆಯ ಪರಿಣಾಮ 'ಮಹತ್' ಅಥವಾ 'ಬುದ್ಧಿ' ಇದರ ವ್ಯಾಪಾರವೇ ಅಧ್ಯವಸಾಯ 'ಬುದ್ಧಿ'ಯ ಪರಿಣಾಮ. 'ಅಹಂಕಾರ' ಇದು ಸಾತ್ವಿಕ, ತಾಮಸ ಎಂದು ಎರಡು ವಿಧ. ಸಾತ್ವಿಕಾಹಂಕಾರವು ಐದು ಕರ್ಮೇಂದ್ರಿಯಗಳು[೧೮] ಐದು ಜ್ಞಾನೇಂದ್ರಿಯಗಳು[೧೯] ಮತ್ತು ಪುನಸ್ಸು ಇವುಗಳಲ್ಲಿ ಪರಿಣಮಿಸುತ್ತದೆ. ತಾಮಸಾಹಂಕಾರವು ಶಬ್ದತನ್ಮಾತ್ರಾದಿ ಐದು ಸೂಕ್ಷ್ಮಭೂತಗಳ ಮೂಲಕ ಆಕಾಶ, ವಾಯು, ತೇಜಸ್ಸು, ನೀರು(ಅಪ್) ಮತ್ತು ಪೃಥಿವೀ ಎಂಬ ಪಂಚಭೂತಗಳಾಗಿ ಪರಿಣಮಿಸುತ್ತದೆ.

'ಶುದ್ಧಸತ್ವ'ವು ಇದಕ್ಕಿಂತ ವಿಲಕ್ಷಣವಾದ ಬೇರೊಂದು ದ್ರವ್ಯ. ಇದು ತ್ರಿಗುಣದ ಮೇಲ್ಭಾಗದಲ್ಲಿ ಅನಂತವಾಗಿ ವ್ಯಾಪಿಸಿದೆಯೆಂದು ಹೇಳಿದೆ. ಮತ್ತು ಶಾಶ್ವತವಾಗಿಯೂ, ನಿರತಿಶಯವಾದ ಅನುಕೂಲತೆಯಿಂದ ಕೂಡಿದ್ದಾಗಿಯೂ ಜ್ಞಾನಮಯವಾಗಿಯೂ, ಪರಮಾತ್ಮನ ಆರು ಮುಖ್ಯವಾದ ಗುಣಗಳಿಗೆ ಪ್ರಕಾಶಕವಾಗಿಯೂ ಮತ್ತು ಈಶ್ವರ, ನಿತ್ಯಮುಕ್ತರ ದೇಹಕ್ಕೆ ಕಾರಣಭೂತವಾಗಿದೆಯೆಂವೂ ಹೇಳಲಾಗಿದೆ. ಇಲ್ಲಿಯೂ ಪಂಚಭೂತ ಸ್ವಭಾವವಿದೆಯಾದರೂ ಎಲ್ಲಾ ವಿಧವಾದ ಭೋಗಗಳೂ ವೈಭವವೂ ಇರುವುದರಿಂದ ಸಂಪೂರ್ಣವಾಗಿ ಆನಂದಮಯವಾಗಿದೆಯೆಂದು ಅಭಿಪ್ರಾಯ. ಇದನ್ನೇ ವೈಕುಂಠವೆಂದೂ ಪರಮಪದವೆಂದೂ ಮುಂತಾಗಿ ವರ್ಣಿಸುತ್ತಾರೆ. ಮೊದಲು ಹೇಳಿರುವ ತ್ರಿಗುಣವು ಸಂಕಲ್ಪಮಾತ್ರದಿಂದ ಸೃಷ್ಟಿ-ಸ್ಥಿತಿ-ಲಯಗಳಿಗೆ ಅರ್ಹವಾಗಿರುವ ಐಶ್ವರ್ಯ ರೂಪದಲ್ಲಿರುವುದರಿಂದ ಅದಕ್ಕೆ 'ಲೀಲಾವಿಭೂತಿ' ಯೆಂದೂ 'ಶುದ್ಧಸತ್ವ' ದಲ್ಲಿ ಹೊಸ ಸನ್ನಿವೇಶಗಳು ಸೃಷ್ಟಿಸಲ್ಪಟ್ಟಾಗ್ಯೂ ನಿತ್ಯ ಸನ್ನಿವೇಶಗಳೇ ಅಧಿಕವಾಗಿರುವುದರಿಂದ ಅದು 'ನಿತ್ಯವಿಭೂತಿ' ಯೆಂದೂ ಪ್ರಸಿದ್ಧವಾಗಿವೆ. ಇವೆರಡರ ಮಧ್ಯವಲ್ಲಿ ಪ್ರವಹಿಸುತ್ತಿರುವ 'ವಿರಜಾ' ನದಿಯನ್ನು ದಾಟಿಕೊಂಡು ಇಲ್ಲಿಯ ವಸ್ತುಗಳು ಅಲ್ಲಿಗೂ, ಅಲ್ಲಿನವು ಇಲ್ಲಿಗೂ ಪ್ರವೇಶಿಸಬಹುದು. ಆದರೆ ಅವುಗಳ ಸ್ವಭಾವ ಮಾತ್ರ ಬದಲಾಯಿಸು

೧೮. ವಾಕ್, ಪಾಣಿ, ಪಾದ, ಪಾಯು, ಉಪಸ್ಥ.

೧೯. ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮ,

ವುದಿಲ್ಲ. ಹೀಗಿರುವುದರಿಂದಲೇ ವಿಗ್ರಹಾದಿಗಳಲ್ಲಿ ಪರಮಪುರುಷನ ಪ್ರವೇಶವು ಸಾಧ್ಯವೆಂದು ಸಿದ್ಧಾಂತದ ಉಪಪತ್ತಿ.

'ಜೀವ'ನ ಸ್ವರೂಪದ ವಿಚಾರದಲ್ಲಿ ಅನೇಕ ಮುಖ್ಯಾಂಶಗಳಿವೆ. ಮೊದಲಾಗಿ, ಜೀವಾತ್ಮನಿಗೂ ಪರಮಾತ್ಮನಿಗೂ ಕೆಲವು ವಿಷಯಗಳಲ್ಲಿ[೩೦] ಮಾತ್ರ ಬಿಟ್ಟು ಮಿಕ್ಕ ವಿಷಯಗಳಲ್ಲಿ ಅತ್ಯಂತ ಸಾಮ್ಯವಿದೆ. ಪರಮಾತ್ಮಾತ್ಯಂತ ಸಾಮ್ಯವೇ 'ಜೀವ'ನಿಗೆ ಧ್ಯೇಯ; ಆದರೆ 'ಸಾಮ್ಯ' ಮಾತ್ರ. ಎಂದರೆ ಜೀವಾತ್ಮನು ಪರಮಾತ್ಮ ಪದವಿಯನ್ನಾಗಲಿ, ಸಮಾನಸ್ಕಂಧತೆಯನ್ನಾಗಲೀ, ಪರಮಾತ್ಮತ್ವವನ್ನೇ ಆಗಲೀ ಅಪೇಕ್ಷಿಸುವುದಿಲ್ಲ. ಪರಮಾತ್ಮನು ಯಾವಾಗಲೂ ಜೀವಾತ್ಮ ಸ್ವಸಾಮ್ಯಪ್ರಾಪ್ತಿಯನ್ನು ಹೊಂದುವಂತೆ ಅನುಗ್ರಹಿಸುತ್ತಲೇ ಇರುತ್ತಾನೆ, ಅದೇ ಅವನ ಆಶೆಯೂ ಆಗಿದೆ. ಅಂತೂ ಸಿದ್ಧಾಂತ ರೀತಿಯಾಗಿ ಜೀವಾತ್ಮ ಪರಮಾತ್ಮರಿಗೆ ಅಭೇದವು ನ್ಯಾಯವಲ್ಲ. ಯಾವತ್ತಿಗೂ ಜೀವಾತ್ಮನಿಗೆ ಪರಮಾತ್ಮನು ಸ್ವಾಮಿ, ಪರಮಾತ್ಮ ಕೈಂಕರ್ಯವೇ ಜೀವಾತ್ಮನ ಕರ್ತವ್ಯ. ಇದನ್ನು ಬಿಟ್ಟರೆ ಅನೇಕ ಜೀವಾತ್ಮ ವಸ್ತುಗಳ ಪೈಕಿ ಒಂದಕ್ಕೊಂದಕ್ಕೆ ಯಾವ ವಿಧವಾದ ವ್ಯತ್ಯಾಸವೂ ಇಲ್ಲ. ಎಲ್ಲ ಅಂಶಗಳಲ್ಲಿಯೂ ಎಲ್ಲ ಜೀವಾತ್ಮ ವಸ್ತುಗಳೂ ಅತ್ಯಂತ ಸಮಾನವಾದುವು. ದೇಹವೆಂಬ ಉಪಾಧಿ ಮೂಲಕವೇ ವರ್ಣಭೇದ ವ್ಯವಸ್ಥೆಯನ್ನು ಅಂಗೀಕರಿಸಿದೆ. ಆದುದರಿಂದಲೇ ಪರಮಾತ್ಮಾನುಗ್ರಹಕ್ಕೂ ಎಲ್ಲ ಜೀವಾತ್ಮವಸ್ತುಗಳೂ ಸಮಾನವಾಗಿ ಪಾತ್ರವಾದುವು. ಪರಮಾತ್ಮನಿಗೆ ಎಲ್ಲರ ವಿಷಯದಲ್ಲಿಯೂ ಸಮಾನವಾದ ವಾತ್ಸಲ್ಯವೂ ಮೋಕ್ಷ ಸಂಪಾದನ ತತ್ಪರತೆಯೂ ಇದ್ದೇ ಇವೆ.

'ಜೀವಾತ್ಮ'ನಿಗೆ ಒಂದು ವಿಧವಾದ ಸ್ವಾತಂತ್ರ್ಯವಿದೆ. ಚೇತನತ್ವ, ಜ್ಞಾತೃತ್ವ, ಕರ್ತೃತ್ವ, ಭೋಕ್ತೃತ್ವಗಳು[೩೧] ಪ್ರತ್ಯೇಕವಾಗಿ ಅವನಿಗಿರುವುದರಿಂದ ಸಂಸಾರದಶೆಯಲ್ಲಿ ಕರ್ಮಬಂಧಕ್ಕೆ ಸಿಕ್ಕಿ ಅನೇಕ ವಿಧವಾಗಿ ತೊಂದರೆ

---

೩೦. ಸೃಷ್ಟಿ ಸ್ಥಿತಿ ಸಂಹಾರಕರ್ತೃತ್ವ ಮೋಕ್ಷಪ್ರದತ್ವ ಮೊದಲಾದುವು.

೩೧. ಇವೆಲ್ಲ ಮುಕ್ತದಶೆಯಲ್ಲಿ ಮಾತ್ರ ನೈಜವೆಂದೂ ಸಂಸಾರದಶೆಯಲ್ಲಿ ಭೋಕ್ತೃತ್ವವು ಪರಿಮಿತವಾಗಿಯೂ ಜ್ಞಾತೃತ್ವವು ಸಂಕುಚಿತವಾಗಿಯೂ ಕರ್ತೃತ್ವವು ಸಂಕುಚಿತವಾಗಿಯೂ ಕರ್ತೃತ್ವವು ಕರ್ಮಫಲಾಧೀನವಾಗಿಯೂ ಇರುತ್ತವೆಂಬ ವ್ಯವಸ್ಥೆ.

ಪಡುವುದು ತೊಂದರೆಪಡುವುದು ಸಾಧ್ಯವಾಗಿದೆ. ಕರ್ಮಾಕ್ಕನುಸಾರವಾಗಿ ವಿವಿಧ ದೇಹ ಪರಿಗ್ರಹವೂ ವಿವಿಧ ದುಃಖಾನುಭವವೂ ಆಗಬೇಕಾಗುತ್ತದೆ. ಆದರೆ ಪರಜ್ಞಾನ, ಪರಭಕ್ತಿಗಳ ಸಹಾಯದಿಂದ ಸಂಸಾರ ದುಃಖದಿಂದ ತಪ್ಪಿಸಿಕೊಳ್ಳುವುದಕ್ಕೂ ಅವಕಾಶವಿದ್ದೇ ಇದೆ.

'ಅಹಂ' (ನಾನು) ಎಂಬುದು 'ಜೀವ' ನನ್ನು ಬೋಧಿಸುವುದಿಲ್ಲವೆಂದು ಅದ್ವೈತಿಗಳ ಅಭಿಪ್ರಾಯ. ಆದರೆ ರಾಮಾನುಜ ಸಿದ್ಧಾಂತದಲ್ಲಿ 'ಜೀವ'ನ ಸತ್ಯತ್ವಕ್ಕೆ ಇದೇ ಒಂದು ಪ್ರಮಾಣ. 'ಜೀವನ' ಸ್ವರೂಪವನ್ನು ಇವರು ನಿತ್ಯ, ಶಾಶ್ವತ, ಪುರಾಣ ಎಂದು ಮೊದಲಾಗಿ ವರ್ಣಿಸಿರುತ್ತಾರೆ. ಜೀವನು ಜ್ಞಾನಸ್ವರೂಪನು. ಕರ್ತೃತ್ವಾದಿಗಳು 'ಜೀವ'ನಿಗೆ ಆಗಂತುಕ ಧರ್ಮಗಳಲ್ಲಿ ದೇಹಾತಿರಿಕ್ತವಾದ ಜೀವಾತ್ಮರನ್ನು ನಿತ್ಯ, ಬದ್ಧ, ಮುಕ್ತರೆಂಬುದಾಗಿ ಮೂರು ವಿಭಾಗ ಮಾಡಲಾಗಿದೆ. ಇದರ ಅರ್ಥವು ಸ್ಪಷ್ಟವಾಗಿಯೇ ಇದೆ.

'ಪರಮಾತ್ಮ'ನ ಸ್ವರೂಪವು ಇನ್ನೂ ಬಹಳ ಮಟ್ಟಿಗೆ ಅತಿಶಯವಾಗಿದೆ. ಜೀವನು ಆಧೇಯನೂ, ವಿಧೇಯನೂ, ಶೇಷಭೂತನೂ ಪರತಂತ್ರನೂ ಆದರೆ ಪರಮಾತ್ಮನು ಸರ್ವಾಧಾರನೂ, ಸರ್ವನಿಯಾಮಕನೂ ಶೇಷಿಸ್ವರೂಪನೂ ಸ್ವತಂತ್ರನೂ ಆದವನು. ಇವನ ಸ್ವರೂಪವನ್ನು ಪೂರ್ಣವಾಗಿ ವರ್ಣಿಸುವುದು ಯಾರಿಗಾದರೂ ಕಷ್ಟಸಾಧ್ಯ. ಸಮಸ್ತಗುಣಪರಿಪೂರ್ಣನು, ಪರಮಕಾರುಣಿಕನು. ಸರ್ವಶಕ್ತ, ಸರ್ವೇಶ್ವರ, ದೋಷರಹಿತ, ಸಕಲಫಲಪ್ರದ, ಹೀಗೆ ಇವನನ್ನು ವರ್ಣಿಸುತ್ತ ಹೋದರೆ ಕೊನೆಯೇ ಇರುವುದಿಲ್ಲ. ಇವನೇ ಪ್ರಪಂಚಕ್ಕೆ ಮೂರು ವಿಧವಾದ ಕಾರಣಸ್ವರೂಪನೂ ಆಗಿರುವನು. ಇವನ ಸಂಕಲ್ಪಾಧೀನವಾಗಿಯೇ ಮಿಕ್ಕೆಲ್ಲ ವಸ್ತುಗಳೂ ಕೆಲಸ ಮಾಡುವುವೆಂದು ಹೇಳಲಾಗಿದೆ, ಪರಮಾತ್ಮತತ್ವವು ಲಕ್ಷ್ಮೀನಾರಾಯಣ ಎಂಬ ಎರಡು ಸ್ವರೂಪಗಳನ್ನು ಹೊಂದಿದ್ದರೂ ಈಶ್ವರತ್ವವು ಉಭಯತ್ರ ಇರುವುದರಿಂದ ಪರಮೇಶ್ವರ, ಪರಬ್ರಹ್ಮಾದಿ ಶಬ್ದಗಳು ಎರಡನ್ನೂ ಬೋಧಿಸುತ್ತವೆ. ಪರಮಾತ್ಮನಿಗೆ ಛತ್ರ ಚಾಮರಗಳಂತೆ ಎರಡು ಗುಣಗಳಿವೆ. ಅವು ಸೃಷ್ಟಿಸ್ಥಿತಿಸಂಹಾರಕರ್ತೃತ್ವ ಮತ್ತು ಮೋಕ್ಷಪ್ರದತ್ವಗಳು. ಜೀವಾತ್ಮನಿಗೆ ಈ ಸಾಮರ್ಥ್ಯಗಳಿಲ್ಲ. ಮತ್ತು ಪರಮಾತ್ಮನ ಸ್ವಾತಂತ್ರ್ಯವು ಜೀವಾತ್ಮನದಕ್ಕಿಂತ ಬಹಳಮಟ್ಟಿಗೆ ವಿಲಕ್ಷಣವಾದದ್ದು. ಇದಲ್ಲದೆ, ಶುದ್ಧಸತ್ವಮಯ

ವಾದ ದೇಹ, ಜ್ಞಾನ, ಶಕ್ತಿ, ಔದಾರ್ಯ, ಲಾವಣ್ಯ, ಯೌವನ, ವೀರ್ಯ, ಮೊದಲಾದ ಅಸಂಖ್ಯಾತ ಗುಣಗಳೂ ನಿತ್ಯವಿಭೂತಿ, ಲೀಲಾವಿಭೂತಿ ಎಂಬ ಐಶ್ವರ್ಯಗಳೂ ಪರಮಾತ್ಮನವೇ ಎಂದೂ ಹೇಳಿದೆ.

ಪರಮಾತ್ಮನಿಗೂ ಪ್ರಪಂಚಕ್ಕೂ ಇರುವ ಸಂಬಂಧದ ವಿಚಾರವಾಗಿ ಕೆಲವು ವಿಷಯಗಳನ್ನು ಹಿಂದೆಯೇ ಸೂಚಿಸಿದೆ. ಶರೀರಕ್ಕೂ ಆತ್ಮಕ್ಕೂ ಯಾವ ವಿಧವಾದ ಸಂಬಂಧವಿದೆಯೋ ಅದೇ ವಿಧವಾದ ಸಂಬಂಧವು ಪರಮಾತ್ಮನಿಗೂ ಪ್ರಪಂಚಕ್ಕೂ ಇದೆಯೆಂದು ಹೇಳಬಹುದು. ಈ ಶರೀರಾತ್ಮಭಾವ ಅಥವಾ ಶೇಷಶೇಷಿ ಭಾವೋಪದೇಶಕ್ಕೆ ತಾತ್ಪರ್ಯರೂಪವಾಗಿ ಅನೇಕ ರಹಸ್ಯಾರ್ಥಗಳು ಉಪದಿಷ್ಟವಾಗಿವೆ. ಪ್ರಪಂಚವು ಪರಮಾತ್ಮನ ಶರೀರವೆಂದರೆ ದೇಹದ ವಿವಿಧ ಅವಯವಗಳು ಹೊಂದಿಕೊಂಡು ಯಾವರೀತಿ ವರ್ತಿಸುತ್ತವೆಯೋ ಅದೇ ರೀತಿ ಪ್ರಪಂಚದ ಎಲ್ಲ ಪ್ರಾಣಿಗಳೂ ಪರಸ್ಪರ ದ್ವೇಷಿಸದೆ ಸೌಹಾರ್ದದಿಂದಲೂ ಸಹಕಾರದಿಂದಲೂ ಜೀವಿಸಬೇಕೆಂದು ಅಭಿಪ್ರಾಯ ಮತ್ತು ಪರಮಾತ್ಮನ ಸೇವೆಯನ್ನು ಮಾಡಬೇಕಾದರೆ ಅವನ ಶರೀರರೂಪವಾದ ಪ್ರಪಂಚದ ಮೂಲಕವೇ ಮಾಡಬೇಕೆಂದು ಧ್ವನಿತವಾಗುತ್ತದೆ. ಲೋಕಸೇವೆಯೇ ಈಶಸೇವೆಯೆಂಬ ಉನ್ನತವಾದ ತತ್ವವು ಇದರಿಂದ ಹೊರಪಡುತ್ತದೆ. ಮತ್ತು ಯಾವ ಜೀವನಿಗೆ ಆಗಲಿ ದೇಹವಿಮುಕ್ತನಾಗಬೇಕೆಂಬ ಧ್ಯೇಯವಿದ್ದರೂ ದೇಹವಿರುವಾಗ ಅದರ ವಿಷಯದಲ್ಲಿ ಅಭಿಮಾನವು ಸಹಜವಾಗಿದೆ. ದೇಹದ ಆಸೆ ಆಕಾಂಕ್ಷೆಗಳನ್ನು ಈಡೇರಿಸಿ ವೈರಾಗ್ಯ ಹೊಂದಿ ಮುಕ್ತಿ ಹೊಂದುವುದು ಎಲ್ಲವನ್ನೂ ನಿಗ್ರಹಿಸಿ, ಜಯಿಸಿ ವೈರಾಗ್ಯ ಹೊಂದುವುದಕ್ಕಿಂತ ಸುಲಭವೆಂದು ಇದರ ಅಭಿಪ್ರಾಯ. ಈ ದೃಷ್ಟಿಯಿಂದ ಲೌಕಿಕ ಸುಖಾನುಭವಕ್ಕೆ ಕಠಿನವಾದ ಪ್ರತಿಬಂಧಕವೇನೂ ಇಲ್ಲ. ಪ್ರಕೃತ ಜೀವನಿಗೆ ದೇಹಾಭಿಮಾನವಿರುವಂತೆ ಪರಮಾತ್ಮನಿಗೆ ಪ್ರಪಂಚದ ವಿಷಯದಲ್ಲಿ ನಿರತಿಶಯವಾದ ಪ್ರೀತಿಯು ಇದ್ದೇಇದೆಯೆಂಬುದು ಸ್ಪಷ್ಟವಾಗುತ್ತದೆ. ಹೀಗೆ ಪರಮಾತ್ಮನಿಗೆ ಪ್ರಿಯವಾದ ಪ್ರಪಂಚದ ವಿಷಯದಲ್ಲಿ ಭಕ್ತರಾದವರು ಯಾವ ರೀತಿ ವರ್ತಿಸಬೇಕೆಂಬುದು ಮುಖ್ಯವಾದ ವಿಷಯ. ಒಬ್ಬರು ಇನ್ನೊಬ್ಬರ ವೇಷ, ನಡೆ, ನುಡಿ, ಆಚಾರ ಇವುಗಳನ್ನು ದೂಷಿಸುವುದು; ಇತರರ ಸ್ವಾಭಾವಿಕ ಗುಣಗಳನ್ನು ಅವಹೇಳನ ಮಾಡುವುದು; ತನ್ನ ವರ್ತನೆ ಮತ್ತು ವ್ಯಕ್ತಿ

ತ್ವಗಳೇ ಸರ್ವೋತ್ಕೃಷ್ಟವೆಂದು ಭಾವಿಸಿ ಇತರರನ್ನು ದೂಷಿಸುವುದು ಇವೇ ಮೊದಲಾದ ರಾಗದ್ವೇಷಗಳು ಭಗವತ್ಪ್ರಿಯವಾದ ಸಮಾನವಾದ ಮತ್ತೊಂದು 'ಜೀವ'ನ ವಿಷಯದಲ್ಲಿ ದುರ್ವರ್ತನೆಯನ್ನು ಪ್ರದರ್ಶಿಸಿದಂತೆ ಆಗುವುದರಿಂದ ಭಗವನ್ನಿಗ್ರಹಕ್ಕೆ ಪಾತ್ರವಾಗುವುದರಲ್ಲಿ ಸಂದೇಹವೇ ಇಲ್ಲ. ಇವೆಲ್ಲ ಶೇಷ ಶೇಷಿಭಾವಕ್ಕೆ ತಾತ್ಪರ್ಯರೂಪವಾದ ರಹಸ್ಯಾರ್ಥಗಳು.

ಸಿದ್ಧಾಂತಕ್ಕನುಸಾರವಾಗಿ ' ಕಾಲ 'ವು ಸರ್ವದಾ ವಿಶೇಷಣರೂಪವು.

ಸತ್ವ, ರಜಸ್ಸು, ತಮಸ್ಸು, ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಸಂಯೋಗ ಮತ್ತು ಶಕ್ತಿ ಎಂದು ಅದ್ರವ್ಯಗಳು ಹತ್ತು. ದ್ರವ್ಯಾದ್ರವ್ಯ ಸಮಷ್ಟಿಯಿಂದ ಪ್ರಪಂಚವು ಪರಿಣಮಿಸುತ್ತದೆಯೆಂದು ಹೇಳಿದೆ.

ಹೀಗೆ ತತ್ವತ್ರಯದ ಐಕ್ಯವನ್ನು ತಿಳಿದು ಜ್ಞಾನಾರ್ಜನೆಯಿಂದ ಕೃತ ಕೃತ್ಯನಾದಮಾತ್ರಕ್ಕೆ ಭಕ್ತಿಮಾರ್ಗಾರ್ಹತೆಯು ದೊರಕುವುದಿಲ್ಲ. ಜ್ಞಾನದ ಜೊತೆಗೆ ಕರ್ಮಾನುಷ್ಠಾನವೂ ಬೇಕೇ ಬೇಕು. ಕರ್ಮಯೋಗವೆಂದರೆ ಯಾಗ, ದಾನ, ಹೋಮ, ದೇವತಾರ್ಚನೆ, ತೀರ್ಥಯಾತ್ರೆ ಮೊದಲಾದು ವನ್ನು ಮಾಡುವಿಕೆ. ಒಂದು ಕೆಲಸವನ್ನು ಮಾಡಬೇಕಾದರೆ ಒಂದು ಫಲ ವನ್ನು ಅಪೇಕ್ಷಿಸುವುದು ಸಹಜವೂ ಸ್ವಾಭಾವಿಕವೂ ಆಗಿದೆ. ಹೀಗೆ ಯಾಗಾದಿಗಳಿಗೂ ಕೂಡ ಪುತ್ರಪ್ರಾಪ್ತಿ, ಸ್ವರ್ಗಪ್ರಾಪ್ತಿ, ವೃಷ್ಟಿ ಮೊದಲಾಗಿ ವಿವಿಧ ಫಲಗಳನ್ನು ಹೇಳಲಾಗಿದೆ. ಆದರೆ ರಾಮಾನುಜ ಸಿದ್ಧಾಂತಕ್ಕನು ಸಾರವಾಗಿ ಫಲಾಭಿಸಂಧಿಯಿಂದ ಮಾಡಿದ ಕರ್ಮಾನುಷ್ಠಾನವು ಬಂಧಕ್ಕಾ ಗಿಯೇ ಹೊರತು ಮೋಕ್ಷಕ್ಕೆ ಉಪಯೋಗವಾಗುವುದಿಲ್ಲ. ವೇದೋಕ್ತವಾದ ಕರ್ಮಗಳಿಗೂ ಕರ್ತೃವಿಗೂ ಫಲ, ಸಂಗ ಮತ್ತು ಕರ್ತೃತ್ವಗಳೆಂಬ ಮೂರು ವಿಧವಾದ ಸಂಬಂಧಗಳಿರುತ್ತದೆ. ಇವುಗಳನ್ನು ಪರಮಾತ್ಮನಲ್ಲಿಯೇ ಸಮ ರ್ಪಿಸಿ ತನಗೆ ಸೇರಿದ್ದಲ್ಲವೆಂದು ಭಾವಿಸಿ ಕರ್ಮಗಳನ್ನು ಅನುಷ್ಠಾನ ಮಾಡು ವುದೇ ಫಲಸಂಗತ್ಯಾಗಪೂರ್ವಕವಾದ ಕರ್ಮಾನುಷ್ಠಾನ ಇದೇ ಪರಮ ಶ್ಲಾಘನೀಯವು.

'ಭಕ್ತಿ' ಯೋಗವು ಎಲ್ಲರಿಗೂ ಸಾಧ್ಯವಿಲ್ಲವೆಂದು ಹಿಂದೆಯೇ ಹೇಳಿದೆ. ವೇದಾಂತದ ವಿದ್ಯೆಯಲ್ಲಿ ಅಧಿಕಾರವಿಲ್ಲದವರಿಗೂ ಭಕ್ತಿ ಕಷ್ಟ, ಪ್ರಪತ್ತಿ ಸುಲಭ ಎಂಬ ಭಾವನೆ ಇರುವವರಿಗೂ ಭಕ್ತಿಗೆ ಕಡೆಯಾಗಿ ಕಂಡುಬರುವ ಪಾಪದ

ಪರಿಹಾರಕ್ಕೆ ಉಪಾಯಭೂತವಾಗಿಯೂ ಪ್ರಪತ್ತಿಯು ವಿಹಿತವಾಗಿದೆ. ಪ್ರಪತ್ತಿಯು ಈಶ್ವರನಲ್ಲಿ ಮೇಲೆ ಹೇಳಿದ ಶೇಷತ್ವಾನುಸಂಧಾನವೇ ಹೊರತು ಮತ್ತೇನೂ ಅಲ್ಲ. ಭಕ್ತಿಯೋಗ ಸಿದ್ಧಿಯನ್ನು ಹೊಂದಿದ ಸಂಯಮೀಂದ್ರರು ಪರಮಾತ್ಮನಲ್ಲಿ ಮತ್ತೊಂದು ಜೀವಾತ್ಮವಸ್ತುವನ್ನು ಅರ್ಪಿಸಿ ಅದರ ರಕ್ಷಣೆಯ ಭಾರವನ್ನು ಸ್ವೀಕರಿಸುವಂತೆ ಪ್ರಾರ್ಥಿಸುತ್ತಾರೆ. ಪ್ರಪತ್ತಿಮಾರ್ಗಕ್ಕನುಸಾರವಾಗಿ ಆಚಾರ್ಯರನ್ನು ಆಶ್ರಯಿಸಿ ಅವರ ಮೂಲಕ ಭಗವಂತನ ಸಾನ್ನಿಧ್ಯವನ್ನೂ ಅನುಗ್ರಹವನ್ನೂ ಪಡೆಯುವ ಪದ್ಧತಿಯು ಈಗಲೂ ಆಚರಣೆಯಲ್ಲಿದೆ. ಆನುಕೂಲ್ಯಸಂಕಲ್ಪ, ಪ್ರಾತಿಕೂಲ್ಯವರ್ಜನೆ, ಕಾರ್ಪಣ್ಯ, ಮಹಾವಿಶ್ವಾಸ, ರಕ್ಷಕತ್ವಪ್ರಾರ್ಥನೆ ಎಂಬ ಐದು ವಿಧವಾದ ಪರಿಕರಗಳೊಡನೆ ಪ್ರಪತ್ತಿಯನ್ನು ಅನುಷ್ಠಾನ ಮಾಡುವ ಕ್ರಮವು ಗ್ರಂಥಗಳಲ್ಲಿ ವಿಶದವಾಗಿ ಹೇಳಲ್ಪಟ್ಟಿದೆ. ಹೀಗೆ ಭಕ್ತಿಯಿಂದಲಾಗಲೀ ಪ್ರಪತ್ತಿಯಿಂದಲಾಗಲೀ ನಿರತಿಶಯ ಸುಖರೂಪವಾದ ಮೋಕ್ಷವನ್ನು ಸಂಪಾದಿಸಬಹುದೆಂದು ಸಿದ್ಧಾಂತ ಸಾರಾಂಶ.

## ಉಪಸಂಹಾರ

ಶ್ರೀ ರಾಮಾನುಜ ದರ್ಶನದ ಅತಿಮುಖ್ಯವಾದ ಅಂಶವೆಂದರೆ ಇಲ್ಲಿನ ದೃಷ್ಟಿವೈಶಾಲ್ಯ ಮತ್ತು ಉದಾರಮನೋಭಾವ. ತಮ್ಮ ಸಹೋದರರಂತಿರುವ ಇತರ ಜೀವಗಳಲ್ಲಿ ಸಹಾನುಭೂತಿಯಿಂದ ಎಲ್ಲ ಜೀವಗಳ ಸಮತೆಯನ್ನು ಸಾರಿ ಮೋಕ್ಷಕ್ಕೆ ಅರ್ಹತೆಯನ್ನು ಸ್ಥಾಪಿಸಿದರು. ಆಧುನಿಕ ಸಮತಾಭಾವನೆ ಪ್ರಾಪಂಚಿಕ ವಿಷಯಗಳಲ್ಲಾದರೆ, ಆಚಾರ್ಯರು ಅದನ್ನು ಆಧ್ಯಾತ್ಮಿಕಕ್ಕೂ ಅನ್ವಯಿಸಿದರು. ಜೀವಿ ಕ್ಷಮೆಬೇಡಿ ಬಂದರೆ, ದಂಡ ವಿಧಿಸುವ ಬದಲು, ಪ್ರಸನ್ನನಾದರೆ ಆತ ಮೋಕ್ಷಕ್ಕೆ ಅರ್ಹನೆಂಬುವುದು ಸ್ವರಸ ; ಪರಮಾತ್ಮನ ದಯಾಮಯತೆಗೆ ಅನುಗುಣ.

ಪರಮಾತ್ಮ ನಿರೂಪಣೆಯಲ್ಲಿ ಹೃದಯಂಗಮವಾದ ಒಂದಂಶವಿದೆ. ಅದು ನಮಗೆ ಪರಮಾತ್ಮನಲ್ಲಿ ಎಷ್ಟು ಭಕ್ತಿಯಿರಬಹುದೋ- ಅದಕ್ಕಿಂತಲೂ ಹೆಚ್ಚುಪಾಲು ಆತನಿಗೆ ಪ್ರೀತಿ ವಾತ್ಸಲ್ಯಗಳಿವೆಯೆಂಬುದು. ನಿರಂಕುಶನೂ, ಸರ್ವಸ್ವತಂತ್ರನೂ ಆದ ಪರಮಾತ್ಮನ ಲೀಲೆಯಾದ ಪ್ರಪಂಚದ ಆಡಳಿತವೆಲ್ಲ

ಜೀವನ ಮುಕ್ತಿಗಾಗಿಯೇ. ಭಕ್ತ ತನ್ನ ಬಳಿ ಬರಲೆಂಬ ಕಾತರ ಪರಮಾತ್ಮ ನಿಗೆಂಬುದು ವಿಶಿಷ್ಟಾದ್ವೈತದಲ್ಲೇ ಕಾಣಬೇಕು.

'ಅಭೇದ' ಶ್ರುತಿಗಳಿಂದ 'ಅದ್ವೈತ' ಹೊರಟಿತು; 'ದ್ವೈತ' ವು 'ಭೇದ' ಶ್ರುತಿಗಳನ್ನು ನೆಚ್ಚಿತು. 'ಭೇದ' ಶ್ರುತಿಗೆ ಅದ್ವೈತವೂ, 'ಅಭೇದ' ಶ್ರುತಿಗೆ 'ದ್ವೈತ' ಸಮಾಧಾನ ಹೇಳುವುದು ಕಷ್ಟವಾಯಿತು. ಇಲ್ಲಾದರೋ ಶ್ರುತಿಗಳನ್ನು ಭೇದ, ಅಭೇದ, ಘಟಕ ಎಂಬ ಮೂರು ವಿಭಾಗಮಾಡಿ ಸಮಂಜಸವಾಗಿ ಮಾಡಿರುವುದು ಶ್ಲಾಘನೀಯ.

ಸೂತ್ರಾರ್ಥವಿವರಣೆಯಲ್ಲೂ ರಾಮಾನುಜರ ವ್ಯಾಖ್ಯಾನ ಹೆಚ್ಚು ಸ್ವರಸವೆಂದು ಡಾ॥ ಥೀಬೋರವರು ಸ್ಪಷ್ಟಪಡಿಸಿದ್ದಾರೆ; ಜೀವಾತ್ಮ ನಿರೂಪಣೆ ಯಲ್ಲಿಯೂ ಹೀಗೆಯೇ. ಅಲ್ಲದೆ ಇಲ್ಲಿನ ಅನ್ವಯದೃಷ್ಟಿ (Positive out-look) ಗಮನಾರ್ಹ.

ಹೀಗೆ ಆಸ್ತಿಕ್ಯಬುದ್ಧಿಗೆ, ವೈಷ್ಣವಮತಕ್ಕೆ, ಅಧ್ಯಾತ್ಮಿಕಜೀವನ ಮನೋ ಭಾವಗಳಿಗೆ, ಆಚಾರಕ್ಕೆ ತಕ್ಕಂತಿರುವ ಸಿದ್ಧಾಂತವಾಗಿ ರಾಮಾನುಜದರ್ಶನ ಹೊರಟಿತು. ಸರ್ವಸಮ್ಮತವೂ ಸರ್ವಶಂಕಾನಿವಾರಕವೂ ಆದುದು ಇದೇ ಎಂದು ಹೇಳಿದರೆ ಸಾಹಸವಾದೀತ. ಒಬ್ಬೊಬ್ಬರಿಗೆ ಸರಿಹೋಗುವುದು ಒಂದೊಂದು ಮಾರ್ಗ. ಎಲ್ಲ ಸಿದ್ಧಾಂತಗಳಗುರಿಯೂ ಒಂದೇ; ಅಧ್ಯಾತ್ಮಿಕ ಮನೋಭಾವ ಪ್ರಬಲವಾಗಿ ಜೀವವು ಶುದ್ಧವಾಗಿ ಸುಖತಮವಾಗುವುದು. ಆದರೆ, ಇಷ್ಟು ಧರ್ಮಬೋಧೆ ನಡೆದಿದ್ದರೂ, ಧರ್ಮಾಧರ್ಮದ ಕಲಹ ನಿರಂ ತರ ನಡೆದೇ ಇರುವುದೊ, ಎಂದಾದರೊಂದು ದಿನ ನಿಲ್ಲುವುದೋ ಹೇಳಬಲ್ಲವ ರಾರು ? ಅಲ್ಲಿನವರೆಗೆ, ಪ್ರತಿಯೊಬ್ಬನೂ ತತ್ವಜ್ಞಾನವನ್ನು ಸಂಪಾದಿಸಿ, ಇತರರಿಗೆ ತಿಳಿಯಹೇಳಿಯೋ ಮತ್ತು ಆವಶ್ಯಕತೆ ಶಕ್ತಿಗಳಿದ್ದಲ್ಲಿ ಹೊಸ ತತ್ವ ಸಾರುತ್ತಲೋ ಅಥವಾ ಇರುವುದನ್ನೇ ಪರಿಷ್ಕರಿಸುತ್ತಲೋ ಇತರರಿಗಾಗಿ ಶ್ರಮಿಸುತ್ತ ಜೀವನ ಸಾರ್ಥಕ್ಯ ಹೊಂದುವುದು ಆಧ್ಯಾತ್ಮಿಕತೆಯ ಪರಮಾಕಾಂಕ್ಷೆ.

---